# ಉಳುವವನಿಗೇ ಜಮೀನು!

(ಚೀನಾದ ನವೋದಯ ಕಾದಂಬರಿ)

ಲೇಖಕರು :

ಹಿಸಿಯೋ ಚೀನ್

ಅನುವಾದಕರು :

ಕೆ. ಎಲ್. ಗೋಪಾಲಕೃಷ್ಣ, ಬಿ.ಎ., (ಆನರ್ಸ್)



ಪ್ರಕಾಶಕರು :

ಇಂಡಿಯಾ ಚೀನಾ ಸ್ನೇಹಸಂಘ, ಮೈಸೂರು.

# ಪ್ರಕಾಶಕರ ಅರಿಕೆ

ಚೀಣಾ ಭಾರತದಂತೆ ಹಳ್ಳಿಗಳ ದೇಶ. ಅಲ್ಲಿಯ ಬಹುಮಂದಿ ಜನರಿಗೆ ವ್ಯವಸಾಯವೇ ಜೀವನದ ಮುಖ್ಯ ಕಸಬು. ಕ್ರಾಂತಿಗೆ ಹಿಂದೆ ಚೀಣಾದ ರೈತರ ಸಂಖ್ಯೆ ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡದು. ಅವರ ಸಂಖ್ಯೆ ಸುಮಾರು ೩೨೦,೦೦೦೦೦೦.ಅಂದರೆ ಸೋವಿಯೆಟ್ ರಷ್ಯಾ ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನದ -ಒಟ್ಟು ರೈತರ ಸಂಖ್ಯೆಗೆ ಸರಿಸಮಾನವಾದುದು. ಈ ಅಸಂಖ್ಯಾತ ರೈತ ಜನಸ್ತೋಮ ಶತಮಾನಗಳ ಪರ್ಯಂತ ಸಾಮಂತ ಶೋಷಣೆಯಿಂದ ತೊಳಲುತ್ತಿತ್ತು. ಇಂದು ಅವರಿಗೆ ಬಿಡುಗಡೆಯ ಅರುಣೋದಯವಾಗಿದೆ ; ಹೊಸಬಾಳಿನ ಅಂಕುರಾರ್ಪಣವಾಗಿದೆ.

ವ್ಯವಸಾಯವೇ ಜೀವನಾಧಾರವಾಗಿರುವ ರೈತನಿಗೆ ಸ್ವಾತಂತ್ರ್ಯದ ಕಲ್ಪನೆ ಉಂಟಾಗುವುದು ಅವನು ಉಳುವ ಜಮೀನಿನ ಒಡೆಯನಾದಾಗಲೇ, ಚೀಣಾದರೈತ ಇತರ ದೇಶಗಳ ರೈತರಂತೆ ಶತಮಾನಗಳಿಂದಲೂ ತಾನು ಉಳುವ ಭೂಮಿ ತನ್ನದಾಗಿರಬೇಕೆಂದು ಹಂಬಲಿಸುತ್ತಿದ್ದನು. ಅದಕ್ಕಾಗಿ ಸಾವಿರಾರು ವರ್ಷಗಳ ಹೋರಾಟವನ್ನು ನಡೆಸಿದ್ದಾನೆ. ಅವನ ಈ ಹಂಬಲು ಕೈಗೂಡಿದುದು ೧೯೪೯ರಲ್ಲಿ ಜನತಾ ಸರ್ಕಾರದ ಸ್ಥಾಪನೆಯಾದಾಗ.

ಭೂಸುಧಾರಣೆಯಾಗುವುದಕ್ಕೆಮುಂಚೆ ಚೀಣಾದ ಜಮೀನೆಲ್ಲ ಕೆಲವೇ ಮಂದಿ ಜಮೀನ್ದಾರರ ಹಿಡಿತದಲ್ಲಿತ್ತು. ಶೇಕಡ. ೮೦ ಮಂದಿ ರೈತರು ಭೂಮಿ ಇಲ್ಲದವರಾಗಿದ್ದರು. ಜಮೀನ್ದಾರರ ಶೋಷಣೆಗೆ ಸಿಕ್ಕಿ ಅವರ ಜೀವನ ಅತ್ಯಂತ ದಾರುಣಮಯವಾಗಿತ್ತು. ಬೆಳಗಿನಿಂದ ಬೈಗಿನವರೆಗೆ ದುಡಿದರೂ ಅವರ ಹಸಿವು ಇಂಗುವಹಾಗೇ ಇರಲಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಅವರು ಜಮೀನ್ದಾರರ, ಇಲ್ಲವೇ ತೆರಿಗೆ ವಸೂಲು ಮಾಡುವವರ ಅಥವಾ ಸಾಲಕೊಡುವ ಧನಿಕನ ಬಂದಿಯಾಗಿದ್ದರು.

ಭೂಸುಧಾರಣೆಗೆ ಮುಂಚೆ ಚೀಣದ ಹಳ್ಳಿಗಾಡುಗಳ ಜೀವನದ

ಪೂರ್ಣ ಚಿತ್ರ ದೊರೆಯಬೇಕಾದರೆ ನೂರು ಸಂಸಾರಗಳು ಅವರವರ ವರ್ಗದ ಅಂತಸ್ಥಿನ ಪ್ರಕಾರ ಸಾಲುಸಾಲಾಗಿ ನಿಂತಿರುವಂತೆ ಊಹಿಸಿಕೊಳ್ಳಿ.

ಅತ್ಯಂತ ಮುಂದಿನ ಸಾಲಿನಲ್ಲಿ, ನಾಲ್ಕುಜನ ಜಮೀನ್ದಾರರಿದ್ದಾರೆ. ಇವರ ಜೀವನ ಗೇಣಿ ವಸೂಲು ಮಾಡುವುದು, ಬಡ್ಡಿ ವಸೂಲು ಮಾಡುವುದು ; ಇವುಗಳಿಂದ ನಡೆಯಬೇಕಾಗಿದೆ. ಈ ಜಮೀನ್ದಾರರು ವ್ಯವಸಾಯದಲ್ಲಿ ತೊಡಗಿಲ್ಲ. ಅವರು ವಾಸಮಾಡುವುದು ದೂರದ ಪಟ್ಟಣಗಳಲ್ಲಿ. ಅವರು ರೈತರನ್ನು ಊಳಿಗಕ್ಕೆ ಸಂಬಳದಮೇಲೆ ಇಟ್ಟುಕೊಂಡಿಲ್ಲವಾದರೂ ರೈತರು ಅವರಿಗಾಗಿ ಪುಕ್ಕಟೆ ಅವರು ಹೇಳಿದ ಕೆಲಸಗಳನ್ನೆಲ್ಲಾ ಮಾಡಬೇಕು ; ಹಬ್ಬದ ದಿನಗಳಲ್ಲಿ ಕೋಳಿ, ಮೀನು, ಹಂದಿ ಮುಂತಾದುವುಗಳ ಉಡುಗೊರೆ ಕೊಡಬೇಕು. ಹಳ್ಳಿಯ ಒಟ್ಟು ಜಮೀನಿನಲ್ಲಿ ಶೇ. ೬೦ರಷ್ಟು ಜಮೀನು ಅವರ ಸ್ವಾಮ್ಯದಲ್ಲಿತ್ತು.

ಇವರಿಗೆ ಸ್ವಲ್ಪಹಿಂದೆ ೬ ಜನ ಧನಿಕ ರೈತರಿದ್ದಾರೆ. ಇವರ ವರಮಾನದಲ್ಲಿ ಶೇ. ೨೫ರಷ್ಟು ಇತರ ರೈತರಿಗೆ ಭೂಮಿಯನ್ನು ಗುತ್ತಿಗೆಗೆ ಕೊಟ್ಟಿರುವುದರಿಂದಲೂ, ಬಡ್ಡಿಯನ್ನು ವಸೂಲುಮಾಡುವುದರಿಂದಲೂ ಬರುತ್ತದೆ. ಜಮೀನ್ದಾರರಂತೆ ಇವರು ಪಟ್ಟಣವಾಸಿಗರಲ್ಲ ; ಇವರು ಹಳ್ಳಿಯಲ್ಲೇ ಪೂರ್ಣಕಾಲ ವ್ಯವಸಾಯದಲ್ಲಿ ತೊಡಗಿರುತ್ತಾರೆ. ಇವರು ಸುಮಾರು ಶೇ. ೧೦ರಷ್ಟು ಜಮೀನಿನ ಒಡೆಯರು.

ಇವರ ಹಿಂಬದಿಯಲ್ಲಿ ೧೦ಜನ ಮಧ್ಯಮವರ್ಗದ ರೈತರಿದ್ದಾರೆ. ಇವರಿಗೆ ಗುತ್ತಿಗೆಗಳಿಂದ ಬರುವ ವರಮಾನ ಶೇ. ೨೫ಕ್ಕೂ ಕಮ್ಮಿ. ಇವರು ಕೆಲವುಜನ ಕೂಲಿಕಾರರನ್ನು ಇಟ್ಟುಕೊಂಡಿದ್ದರೂ ತಾವೇ ಉಳುವ ಕೆಲಸದಲ್ಲಿ ಬಹುಭಾಗವನ್ನು ಮಾಡುತ್ತಾರೆ. ಇವರೂ ಶೇ. ೧೦ರಷ್ಟು ಜಮೀನಿನ ಒಡೆಯರು.

ಕಡೆಯಸಾಲಿನ ಹಿಂದಿನ ಸಾಲಿನಲ್ಲಿ ೫೦ ಜನ ಬಡರೈತರಿದ್ದಾರೆ. ಇವರಿಗೆ ಜಮೀನಿಲ್ಲ, ವ್ಯವಸಾಯೋಪಕರಣಗಳಿಲ್ಲ ಇವರು ಜೀವನಕ್ಕಾಗಿ

ಧನಿಕರೈತರಲ್ಲಿ ಕೆಲಸಮಾಡಬೇಕು; ಅಲ್ಪಸ್ವಲ್ಪ ಜಮೀನನ್ನು ಜಮೀನ್ದಾರರಿಂದ ಗೇಣಿಗೆ ಪಡೆದು ದುಡಿಯುಬೇಕು. ಇವರು ಸಾಧಾರಣವಾಗಿ ಜಮೀನ್ದಾರರಿಗೆ ಕೊಡುವ ಗುತ್ತಿಗೆ, ಒಟ್ಟು ಉತ್ಪತ್ತಿಯಲ್ಲಿ ಶೇ. ೫೦ ರಿಂದ ೮೦ ಭಾಗ. ಈ ಶೋಷಿತ ಬಹುಸಂಖ್ಯಾತ ರೈತರು ಶೇ. ೨೦ಕ್ಕೂ ಕಮ್ಮಿ ಜಮೀನಿನ ಒಡೆಯರು.

ಕಟ್ಟಕಡೆಯಲ್ಲಿ ೩೦ಜನ ಕೂಲಿಗಾಗಿ ದುಡಿಯುವವರಿದ್ದಾರೆ. ಇವರಿಗೆ ಭೂಮಿಯೇ ಇಲ್ಲ. ಇವರದೇ ಅತ್ಯಂತ ದಲಿತವರ್ಗ.

ಮೇಲಿನ ಚಿತ್ರ ಭೂಸುಧಾರಣೆಗೆ ಹಿಂದಿನ ಚೀಣದ ರೈತರ ಸ್ಥಿತಿಯನ್ನು ತಿಳಿಸುತ್ತದೆ.

ಬಿಡುಗಡೆಯ ನಂತರ ರೈತರ ಜೀವನವನ್ನು ಸುಧಾರಿಸಲು, ಅವರ ಆರ್ಥಿಕಮಟ್ಟವನ್ನು ಹೆಚ್ಚಿಸಲು, ಪರಿಸ್ಥಿತಿ ಅನುಕೂಲವಾಯಿತು. ಜನತಾ ಚೀಣಾದ ರಾಜಕೀಯ ಸಲಹಾಸಮಿತಿ ತಯಾರಿಸಿದ "ಸಾಮಾನ್ಯಕಾರ್ಯಕ್ರಮ" ಈರೀತಿ ನಿರೂಪಿಸುತ್ತದೆ.

"ಸರ್ಕಾರ ಸಾಮಂತಶಾಹೀ ಮತ್ತು ಅರೆಸಾಮಂತಶಾಹೀ ಭೂಸ್ವಾಮ್ಯತ್ವವನ್ನು ನಿರ್ಮೂಲಮಾಡಿ ನಿರ್ದಿಷ್ಟಯೋಜನೆಗಣುವಾಗಿ ರೈತರಿಗೆ ಭೂಮಿಯನ್ನು ಹಂಚಲು ಕಾರ್ಯಕ್ರಮವನ್ನು ಕೈಗೊಳ್ಳಬೇಕು."

ಈ ನಿರೂಪಣೆಯ ಆಧಾರದಮೇಲೆ ೧೯೫೦ರಲ್ಲಿ ಜನತಾಸರ್ಕಾರ "ಭೂಸುಧಾರಣ ಶಾಸನವನ್ನು" ತಯಾರಿಸಿತು. ಈ ಶಾಸನದ ಮುಖ್ಯ ಗುರಿ ಸಾಮಂತಶಾಹೀ ಶೋಷಣೆಯ ಆಧಾರಸ್ಥಂಭವಾಗಿರುವ ಜಮೀನ್ದಾರಿ ಭೂಮಾಲಿಕತ್ವವನ್ನು ತೊಡೆದು ಹಾಕಿ ರೈತರನ್ನೇ ಜಮೀನಿನ ಒಡೆಯರನ್ನಾಗಿ ಮಾಡಿ, ಹಳ್ಳಿಗಳಲ್ಲಿ ವ್ಯವಸಾಯೋತ್ಪನ್ನಗಳನ್ನು ಹೆಚ್ಚಿಸಲು ಮತ್ತು ಚೀಣದ ಕೈಗಾರಿಕಾಪ್ರಗತಿಗೆ ಬೇಕಾದ ವಾತಾವರಣವನ್ನುಂಟುಮಾಡುವುದು"

ಈ ಮಹಾಕಾರ್ಯವನ್ನು ಜನತಾಸರ್ಕಾರ ಸುಮಾರು ೩೦೦,೦೦೦ ಭೂಸುಧಾರಣ ಕಾರ್ಯಕರ್ತರ ನೆರವಿನಿಂದ, ರೈತರ ಸಂಘಗಳ ಮೂಲಕ

ಕೈಗೊಂಡಿತು. ಜಮೀನ್ದಾರರಿಂದ ಭೂಮಿಯನ್ನೂ ಯಂತ್ರೋಪಕರಣ ಗಳನ್ನೂ ಕಸಿದುಕೊಂಡು ಅದನ್ನು ಆಯಾ ಪ್ರದೇಶದ ರೈತರಿಗೆ ಸಮನಾ ಗಿಯೂ ವಿಚಕ್ಷಣೆಯಿಂದಲೂ ಹಂಚಿತು. ಜಮೀನ್ದಾರರನ್ನು ಸಹ ನಿರ್ಗತಿ ಕರನ್ನಾಗಿ ಮಾಡಲಿಲ್ಲ. ಅವರ ಸಂಸಾರದ ಜನಸಂಖ್ಯೆಗನುಗುಣವಾಗಿ ತಲಾ ೧/೩ ಎಕರೆ ಜಮೀನನ್ನು ಬಿಟ್ಟುಕೊಟ್ಟರು. ಪಟ್ಟಣಗಳಲ್ಲಿದ್ದ ಅವರ ಆಸ್ತಿಪಾಸ್ತಿಗಳ ಗೊಡವೆಗೆ ಹೋಗಲಿಲ್ಲ. ರೈತರು ಜಮೀನ್ದಾರರಿಗೆ ಕೊಡ ಬೇಕಾದ ಸಾಲವನ್ನು ರದ್ದುಗೊಳಿಸಿದರು. ಸಾಲದ ಪತ್ರಗಳನ್ನೆಲ್ಲಾ ಸುಟ್ಟುಹಾಕಿದರು.

ಭೂಸುಧಾರಣೆ ಸಾಮಂತಶಾಹೀ ಶೋಷಣೆಯನ್ನು ಮೂಲೋತ್ಪಾ ಟನ ಮಾಡಲು ಕೈಕೊಂಡ ಮೂಲಭೂತಕಾರ್ಯಾಚರಣೆ. ೧೯೫೦ರಲ್ಲಿ ಈ ಮಹಾಕಾರ್ಯ ಆರಂಭವಾಯಿತು. ೧೯೫೨ರ ಆಗಸ್ಟ್ ತಿಂಗಳ ಹೊತ್ತಿಗೆ ಸುಮಾರು ಕೋ. ೩೦ಮಂದಿ ರೈತರಿಗೆ ಭೂಮಿಯನ್ನು ಹಂಚಲಾಗಿತ್ತು.

ಈ ಮಹಾಕಾರ್ಯ ಹಳ್ಳಿಗಳ ಏಳಿಗೆಗೆ ಮಾತ್ರವೇ ಅಲ್ಲದೆ ಪಟ್ಟಣಗಳ ಏಳಿಗೆಗೂ ನೆರವಾಯಿತು. ಚೀಣಾದ ಕೈಗಾರಿಕೋದ್ಯಮಿಗಳು ಎರಡು ಬಹುಮುಖ್ಯವಾದ ತೊಂದರೆಗಳಿಂದ ಹೀನಸ್ಥಿತಿಯಲ್ಲಿದ್ದುವು. ಒಂದನೆಯ ದಾಗಿ ಅವುಗಳಿಗೆ ಬೇಕಾದ ಕಚ್ಚಾಮಾಲುಗಳು ವ್ಯವಸಾಯದ ಹೀನಸ್ಥಿತಿ ಯಿಂದ ಒದಗುತ್ತಿರಲಿಲ್ಲ. ಎರಡನೆಯದು ಅವರು ತಯಾರಿಸಿದ ಮಾಲು ಗಳನ್ನು ಕೊಳ್ಳಲು ಚೀಣಾದ ಜನಸಂಖ್ಯೆಯ ಬಹುಮಂದಿಯಾದ ರೈತರ ಲ್ಲಿದ್ದ ಹಣದ ಅಭಾವ. ಭೂಸುಧಾರಣೆಯ ಫಲವಾಗಿ ಈ ಎರಡು ತೊಂದರೆ ಗಳೂ ಮಾಯವಾದವು. ಜಮೀನಿನ ಒಡೆತನವನ್ನು ಪಡೆದ ರೈತರು ಭೂಮಿಯ ಉತ್ಪನ್ನವನ್ನು ಹೆಚ್ಚಿಸಿದರು. ಹಳ್ಳಿಯಜೀವನ ಪ್ರಗತಿಪರ ವಾಯಿತು. ಕೈಗಾರಿಕೆಗೆ ಬೇಕಾದ ಹತ್ತಿ ಮುಂತಾದ ವಸ್ತುಗಳು ಅಧಿಕ ವಾಗಿ ದೊರೆಯಲು ಪ್ರಾರಂಭವಾಯಿತು. ಆ ಹಳ್ಳಿಯ ರೈತರ ಆರ್ಥಿಕಸ್ಥಿತಿ ಸುಧಾರಿಸಿದುದರಿಂದ, ಪಟ್ಟಣದ ಮಾಲುಗಳಿಗೆ ಹೆಚ್ಚಿನ ಗಿರಾಕಿಗಳೊದಗಿತು. ಹೀಗೆ ನಾಡಿನ ಸರ್ವತೋಮುಖವಾದ ಅಭಿವೃದ್ಧಿಗೆ ಭೂಸುಧಾರಣಕಾರ್ಯ ನೆರವಾಗಿ ಸ್ವಾವಲಂಬನ ಸ್ವಪರಿಪೂರ್ಣರಾಜ್ಯಸ್ಥಾಪನೆಯಾಯಿತು.

ಆಗ್ನೇಯ ಏಷ್ಯದ ಎಲ್ಲಾ ರಾಷ್ಟ್ರಗಳೂ ಚೀಣಾದಿಂದ ಈ ಭೂಸುಧಾರಣೆಯ ಮಹತ್ವವನ್ನು ಅರಿಯಬೇಕು. ಭಾರತದವರಾದ ನಾವೂ ಸಹ ಭೂಸುಧಾರಣೆಯ ಮಹತ್ವವನ್ನು ಮನಗಾಣಬೇಕು. ನಮ್ಮ ದೇಶವೂ ಹಳ್ಳಿಗಾಡುಗಳ ನಾಡು. ಹಳ್ಳಿಗಳ ಆರ್ಥಿಕಸ್ಥಿತಿ ಜಮೀನ್ದಾರಿ ಪದ್ಧತಿಯಿಂದ ಅತ್ಯಂತ ಹೀನಸ್ಥಿತಿಯಲ್ಲಿದೆ. ನಮ್ಮ ಕೈಗಾರಿಕೆಗಳೂ ಕೂಡ ಕ್ರಾಂತಿಗೆ ಹಿಂದಿನ ಚೀಣಾದ ಕೈಗಾರಿಕೆಗಳಂತೆ ಕಚ್ಚಾಮಾಲುಗಳ ಅಭಾವದಿಂದ ಗಿರಾಕಿಗಳ ಅಭಾವದಿಂದ ಹಿಂದೆ ಬಿದ್ದಿವೆ. ಈ ಪರಿಸ್ಥಿತಿಯನ್ನು ಬದಲಾಯಿಸಲು ಭೂಸುಧಾರಣೆಯ ಆವಶ್ಯಕತೆ ಸೂಚಿಸುತ್ತದೆ.

ಚೀಣಾದಲ್ಲಿ ಭೂಸುಧಾರಣಾಕಾರ್ಯ ಸಾಮಂತಶಾಹೀ ಸಂಕೋಲೆಗಳನ್ನು ತೊಡೆದುಹಾಕಿ ಚೀಣಾದ ರೈತರ ಕ್ರಿಯಾಶಕ್ತಿ ಹೊರಹೊಮ್ಮುವಂತೆ ಮಾಡಿತು. ಶತಮಾನಗಳ ಪರ್ಯಂತ ಕ್ಷಾಮಪೀಡಿತ ಚೀಣಾವನ್ನು ಸಮೃದ್ಧಿಕ್ಷೇತ್ರವನ್ನಾಗಿ ಮಾಡಿದುದಲ್ಲದೆ, ಆಹಾರಧಾನ್ಯಗಳನ್ನು ರಫ್ತುಮಾಡಲೂಸಹ ಸಾಧಕವಾಯಿತು. ಕೈಗಾರಿಕಾಕ್ಷೇತ್ರ ಪುನರುಜ್ಜೀವನವಾಗಲು ಬೇಕಾದ ವಾತಾವರಣವನ್ನು ಕಲ್ಪಿಸಿತು.

ಇಲ್ಲಿ ಪ್ರಕಟವಾಗಿರುವುದು ಚೀಣಾದರೈತರ ಬಾಳನ್ನು ಮಾರ್ಪಡಿಸಿದ ಭೂಸುಧಾರಣೆಯ ಕಥೆ. ಈ ಗ್ರಂಥದ ಲೇಖಕರು ೧೯೫೧ರಲ್ಲಿ ಚೀಣಾದ ಭೂಸುಧಾರಣಾ ಕಾರ್ಯಕರ್ತರಾಗಿ ಕೆಲಸಮಾಡಿ ಸ್ವಂತ ಅನುಭವದಿಂದ ಭೂಸುಧಾರಣೆಯ ವಿವಿಧ ಅಂಶಗಳನ್ನು ಹೃದಯಂಗಮವಾಗಿ ಕಥಾರೂಪವಾಗಿ ವರ್ಣಿಸಿದ್ದಾರೆ.

ಇದರ ಅನುವಾದ ಕಾರ್ಯವನ್ನು ಶ್ರೀ ಕೆ. ಎಲ್. ಗೋಪಾಲಕೃಷ್ಣ ಅವರು ಅತ್ಯಂತ ನಿಷ್ಠೆಯಿಂದ ಸರಳವಾಗಿ ಮಾಡಿದ್ದಾರೆ. ಪ್ರಖ್ಯಾತಕಲಾವಿದ ಆರ್.ಎಸ್.ಎನ್ ರವರು ಈ ಪುಸ್ತಕಕ್ಕೆ ಚಿತ್ರಗಳನ್ನು ಒದಗಿಸಿ ಅದನ್ನು ಮತ್ತಷ್ಟು ಆಕರ್ಷಣೀಯವಾಗಿಯೂ ಭೂಸುಧಾರಣೆಯ ಕಾರ್ಯ ಕಣ್ಣಿಗೆ ಕಟ್ಟುವಂತೆಯೂ ಮಾಡಿದ್ದಾರೆ. ಇವರೆಲ್ಲರಿಗೂ ಪ್ರಕಾಶಕರ ಅನಂತ ವಂದನೆಗಳು

ಅನುವಾದಕ್ಕೆ ಅನುಮತಿಯಿತ್ತ ನಮ್ಮ ಚೀನಾಮಿತ್ರರಿಗೂ ವಂದನೆಗಳು. (Director Foreign Languages Publishing House, Guozi Shudian, Peking and Mr.Hsiao-chien)ಈ ಪುಸ್ತಕವನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಪರಿಮಳ ಮುದ್ರಣಾಲಯದ ಮಿತ್ರರಿಗೂ ನಮ್ಮ ಕೃತಜ್ಞತೆ ಸಲ್ಲುತ್ತದೆ.

ಜಿ.ಎಚ್.ಆರ್.
ಪ್ರಕಾಶನದ ಪರವಾಗಿ

*        *        *        *        *        *

## ಪರಿವಿಡಿ

| | | ಪುಟಸಂಖ್ಯೆ |
|---|---|---|
| ೧ | ದಿಗಂತದಲ್ಲಿ ಬದಲಾವಣೆಗಳು | ೧ |
| ೨ | ಕೆಲಸಕ್ಕಾಗಿ ಕಂಕಣ ತೊಟ್ಟರು. | ೩೫ |
| ೩ | ಶೋಕದಿಂದ ಶಕ್ತಿ | ೪೨ |
| ೪ | ವಿಷಸರ್ಪಗಳ ವಿನಾಶ | ೫೯ |
| ೫ | ಕೆಂಪು, ಹಳದಿ ಮತ್ತು ಬಿಳುಪು | ೭೩ |
| ೬ | ಬಿರುಗಾಳಿಯ ಬಳಿಕ ಹೂಬಿಸಲು | ೮೬ |
| ೭ | ಸಂತಸದ ಮೊದಲಸವಿ | ೧೦೨ |

# ಪ್ರಮುಖ ಪಾತ್ರಗಳ ಪರಿಚಯ.

೧. ಚಿ-ಮಿನ್ — ಹುಯಿಲುಂಗ್ ತಾಲ್ಲೂಕಿನ ಭೂಸುಧಾರಣಾದಳದ ನಾಯಕ.

೨. ಚುನ್-ಸಿಂಗ್ (ಲೀ)—ಲೀ ಅಜ್ಜಿಯ ಮಗಳು; ಭೂಸುಧಾರಣೆಯ ಫಲವಾಗಿ ಬಾಲ್ಯವಿವಾಹದ ಬಂಧನದಿಂದ ಮುಕ್ತಳಾದವಳು; ಪುರಸೈನ್ಯದ ಸದಸ್ಯೆ.

೩. ಕುವಾಂಗ್-ಲಿನ್—'ಚಿಕ್ಕಪ್ಪ' ಎಂದು ಕರೆಯಲ್ಪಡುತ್ತಿದ್ದ ಅನುಕೂಲಸ್ಥ ಮಧ್ಯಮವರ್ಗದ ರೈತ.

೪. ಸಿಯನ್—ಒಬ್ಬ ಶ್ರೀಮಂತ ರೈತ.

೫. ಸಿಯಾಂಗ್-ಕಮ್ಯೂನಿಸ್ಟ್ ಪಾರ್ಟಿಯ ಜಿಲ್ಲಾಸಮಿತಿಯ ಕಾರ್ಯದರ್ಶಿ.

೬. ಯು-ಚಾಂಗ್—ಹ್ಸಿಯಾಂಗ್ ಜಿಲ್ಲಾಸರ್ಕಾರದ ಅಧ್ಯಕ್ಷ.

೭. ಚಾ-ಚು—ಒಬ್ಬ ಜಮೀನ್ದಾರ.

೮. ಲೀ-ಅಜ್ಜಿ—೫೩ ವಯಸ್ಸಿನ ವೃದ್ಧೆ.

೯. ಟಾ-ಮಿಂಗ್—ಚಾ-ಚು ಮನೆಯ ಜೀತದಾಳು ; ಪುರಸೈನ್ಯದ ಸದಸ್ಯ.

೧೦. ಲೋ-ಪೈ-ಜಂಗ್—ಅಪರಾಧಿ ಜಮೀನ್ದಾರ.

೧೧. ಷು-ಮಿನ್—ಸ್ಥಳೀಯ ಮಹಿಳಾಗುಂಪಿನ ಮುಖ್ಯಸ್ಥೆ.

೧೨. ಪೆಂಗ್-ಎರು—ತಪ್ಪಿತಸ್ಥ ಜಮೀನ್ದಾರ.

೧೩. ಫು-ಚುವಾನ್—ಪೆಂಗ್-ಎರುವಿನ ಜೀತದಾಳು.

೧೪. ರ್ಸಿ-ವು—ಬೇಸಾಯ ಕೂಲಿಗಳ ಮತ್ತು ಬಡರೈತರ ಗುಂಪಿನ ಮುಂದಾಳು; ಕೊನೆಗೆ ಹಳ್ಳಿಯ ರೈತಸಂಘದ ಅಧ್ಯಕ್ಷನಾದವ.

೧೫. ಶ್ರೀಮತಿ ರ್ಸಿ-ವು—ರ್ಸಿ-ವುವಿನ ಹೆಂಡತಿ.

೧೬. ಕೋ-ಚಾಂಗ್—ಶಾಲಾಧ್ಯಾಪಕ; ಕ್ರಾಂತಿಕಾರೀ ಹುತಾತ್ಮನೊಬ್ಬನ ಮಗ.

೧೭. ಪೆಂಗ್-ಟಿಂಗ್—ಅಪರಾಧಿ ಜಮೀನ್ದಾರ.

೧೮. ಯು-ಟಾಂಗ್—ರ್ಸಿಲು ಗ್ರಾಮಾಧ್ಯಕ್ಷ.

೧೯. ಯೂ-ಚೆನ್—ಸಿಯನ್‌ನ ಮನೆಯಲ್ಲಿ ಮಗುವಿಗೆ ಹಾಲೂಡಿಸುತ್ತಿದ್ದ ದಾದಿ.

೨೦, ಯು-ಲಿಯನ್—ಪೆಂಗ್-ಎರುವಿನ ಮನೆಯಲ್ಲಿ ಸೇವಕಿಯಾಗಿದ್ದವಳು ಪುರಸ್ತ್ರೈನ್ಯದ ಸದಸ್ಯೆ.

೨೧. ಲು-ಯಾಂಗ್– ಭೂಸುಧಾರಣಾಪಳದ ಸದಸ್ಯ ; ಸ್ಸಿ-ಲು ಹಳ್ಳಿಯ ಭೂಸುಧಾರಣಾ ಕಾರ್ಯಕ್ರಮದ ಮೇಲ್ವಿಚಾರಕ.

## ಚೀಣಿ ಅಳತೆಗಳ ಪಟ್ಟಿ

1 ಲೀ = 633 ಗಜಗಳು—1/3 ಮೈಲಿಗಿಂತ ಸ್ವಲ್ಪಹೆಚ್ಚು.

1 ಟಾ = 1/10 ಟಾನ್ (ಪಿಕಲ್) = 50 ಕಿಲೋಗ್ರಾಮ್‌ಗಳು.

1 ಷೆಂಗ್ = 1/10 ಟಾ.

[ಹ್ಯೂನಾನ್ ಪ್ರಾಂತದಲ್ಲಿ ದೊರಕುವ ಫಸಲಿನ ಅಂದಾಜಿನಮೇಲೆ ಭೂಮಿಯನ್ನು ಅಳೆಯುತ್ತಾರೆ. ಸ್ಸಿ-ಲುಹಳ್ಳಿಯ ಕಡೆ, ಎಷ್ಟುಬೀಜ ಬೇಕಾಗುತ್ತದೆ ಎಂಬುದರ ಮೇಲೆ ಭೂಮಿಯನ್ನು ಅಳೆಯುತ್ತಾರೆ.]

1 ಮೌ = $\frac{1}{3}$ ಎಕರೆ.

1 ಟಾ = 7 ಮೌ.

1 ಪಿಕಲ್ = 133 $\frac{1}{3}$ ಪೌಂಡು.

# ಉಳುವವನಿಗೇ ಜಮೀನು !

## ದಿಗಂತದಲ್ಲಿ ಬದಲಾವಣೆಗಳು

" ಈ ಸಾಲಿನ ಕಂದಾಯವನ್ನು ಬೇಗನೇ ಪಾವತಿಮಾಡಿ. ಭೂ ಸುಧಾರಣೆಗೆ ಸಿದ್ಧರಾಗಿ " ಎಂದು ಹುಯಿಲುಂಗ್ ತಾಲ್ಲೂಕಿನ ರೈತ ಸಂಘದವರು, ಆಗಸ್ಟ್ ತಿಂಗಳ ಆದಿಯಲ್ಲೇ ಕರೆ ಕೊಟ್ಟಿದ್ದರು. ಆದರೂ ಸಿಃಲು ಹಳ್ಳಿಯ ರೈತರು ಸ್ವಲ್ಪ ಹಿಂದು ಮುಂದು ನೋಡುತ್ತಿದ್ದರು. ಭೂಸುಧಾರಣೆಯ ಕರೆಯೇನೋ ಅವರಲ್ಲಿ ಆಶಾಕಿರಣವನ್ನು ಮೂಡಿಸಿತ್ತು. ಆದರೆ ಅದರ ಜೊತೆಗೆ, ಅನೇಕ ತಪ್ಪು ತಿಳುವಳಿಕೆಗಳೂ ಅವರಲ್ಲಿ ಮನೆಮಾಡಿದ್ದವು. ಭೂಸುಧಾರಣೆಯಿಂದಾಗುವ ಮಹತ್ಪರಿಣಾಮವನ್ನು ಅವರು ಅರಿತಿರಲಿಲ್ಲ.

ಇದು ಆಶ್ಚರ್ಯವೇನಲ್ಲ. ಶತಮಾನಗಳಿಂದ ಪಾಳೆಯಗಾರ ಸುಲಿಗೆಯು ರೈತರ ಎದೆಯ ರಕ್ತವನ್ನೆಲ್ಲಾ ಬಸಿದಿದ್ದಿತು. ರೈತರ ಜೀವನದಲ್ಲಿ ಬದಲಾವಣೆಯೇ ಇರಲಿಲ್ಲ. ೧೯೨೭ರಲ್ಲಿ ಮಾತ್ರ, ಸ್ವಾತಂತ್ರ್ಯ ದೊರೆತು, ಜನತಾ ರಾಜ್ಯವಿದ್ದ ಕೆಲವು ವಾರಗಳವರೆಗೆ ಸುಖದ ಬೆಳಕನ್ನು ಕಂಡಿದ್ದರು. ಆದರೆ ಕೂಡಲೇ ಕಪ್ಪು ಛಾಯೆ ಮತ್ತೆ ಮುಸುಕಿತು. ಚಿಯಾಂಗ್-ಕೈ-ಷೇಕನ ನಿರಂಕುಶಾಧಿಕಾರದಲ್ಲಿ ಜಮೀನ್ದಾರರು ಮತ್ತೆ ಒಡೆತನ ವಹಿಸಿದರು. (ಚಿಯಾಂಗ್-ಕೈ-ಷೇಕ್ ೧೯೨೦–೧೯೪೯ರವರೆಗೆ ಕೋಮಿಂಟಾಂಗ್ ಪಕ್ಷದ ಮುಖಂಡನಾಗಿ ಚೀನಾ ದೇಶದ ಅಧ್ಯಕ್ಷನಾಗಿದ್ದ. ಜನರು ತನ್ನಲ್ಲಿಟ್ಟಿದ್ದ ವಿಶ್ವಾಸ ಮತ್ತು ನಂಬಿಕೆಯನ್ನು ಈತ ದುರುಪಯೋಗಪಡಿಸಿಕೊಂಡು, ಬ್ರಿಟಿಷ್ ಮತ್ತು ಅಮೆರಿಕನ್ ಸಾಮ್ರಾಜ್ಯಶಾಹಿಗಳೊಂದಿಗೆ ಸೇರಿಕೊಂಡು ದೇಶವನ್ನು ಮತ್ತೊಮ್ಮೆ ದಾಸ್ಯವೃತ್ತಿಗೆ ದೂಡುವುದರಲ್ಲಿ ತೊಡಗಿದ್ದ. ಕಮ್ಯೂನಿಸ್ಟ್ ಪಾರ್ಟಿಯ ನೇತೃತ್ವದಲ್ಲಿ ಇತರ ರಾಷ್ಟ್ರಪ್ರೇಮಿಪಕ್ಷಗಳೆಲ್ಲಾ ಒಂದಾಗಿ ಆತನ ಯತ್ನಗಳನ್ನೆಲ್ಲಾ ಮಣ್ಣುಗೂಡಿಸಿ ೧೯೪೯ರಲ್ಲಿ

ಜನತಾಸರ್ಕಾರ ಸ್ಥಾಪಿಸಿದರು. ಈಗ ಈತ ಚೀನಾದ ಮುಖ್ಯ ಭೂ ಪ್ರದೇಶ ದಿಂದ ಸ್ವಲ್ಪದೂರದಲ್ಲಿರುವ ಫಾರ್ಮೋಸಾ ದ್ವೀಪದಲ್ಲಿ, ಅಮೆರಿಕನ್ ನೆರವಿನಿಂದ ಅಡಗಿಕೊಂಡು ಇನ್ನೂ ರಾಷ್ಟ್ರ ಘಾತುಕ ಕಾರ್ಯದಲ್ಲಿ ತೊಡಗಿದ್ದಾನೆ.) ಹಿಂದಿನ ರೈತರಾಜ್ಯದ ಸವಿ ನೆನಪು ರೈತರ ಮನಸ್ಸಿನಲ್ಲಿ ಆಗಾಗ್ಗೆ ಬರುತ್ತಿದ್ದರೂ, ಬಹಿರಂಗವಾಗಿ ಆ ಬಗ್ಗೆ ಮಾತನಾಡಲು ಅವಕಾಶವಿರಲಿಲ್ಲ. ಹಳ್ಳಿಯ ಫಲವತ್ತಾದ ಭೂಮಿ, ವೀರರೈತರ ರಕ್ತದಿಂದ ತೊಯ್ದಿತು. ಕಾಲಚಕ್ರ ಉರುಳುತ್ತಿದ್ದಂತೆ ರೈತರೂ ಯಾಂತ್ರಿಕವಾಗಿ ದುಡಿಯುತ್ತಾ ಹೋದರು. ಕೋಮಿಂಟಾಂಗ್ ನ್ಯಾಯಾಧಿಪತಿಗಳ ಕಾಲ್ತುಳಿತದಲ್ಲಿ, ತಾಲ್ಲೂಕು ಕಚೇರಿಯ ಲಂಚಕೋರ ಅಧಿಕಾರಿಗಳ ಬಿಗಿ ಹಿಡಿತದಲ್ಲಿ ಮತ್ತು ಕಂದಾಯದ ವಸೂಲುಗಾರರ ಕಿರುಕುಳದಲ್ಲಿ ನರಳುವುದು ಹೆಚ್ಚಾಯಿತು. (ಕೋಮಿಂಟಾಂಗ್ ಹಿಂದೆ ಚೀನಾದ ರಾಷ್ಟ್ರೀಯ ಸಂಸ್ಥೆಯಾಗಿದ್ದಿತು. ಡಾ|| ಸನ್‌ಯಾತ್‌ಸೇನರ ನೇತೃತ್ವದಲ್ಲಿ ಸ್ಥಾಪಿಸಲ್ಪಟ್ಟ ಈ ಸಂಸ್ಥೆ, ದೇಶದ ನಿಜವಾದ ಸ್ವಾತಂತ್ರ್ಯಕ್ಕಾಗಿ ಹೋರಾಡಿತು. ಆದರೆ, ಕೊನೆ ಕೊನೆಗೆ ಚಿಯಾಂಗ್-ಕೈ-ಷೇಕ್‌ನ ಕೈಗೊಂಬೆಯಾಗಿ ದೇಶದ್ರೋಹಿ ಚಟುವಟಿಕೆಗಳಲ್ಲೂ, ಜನರನ್ನು ಸುಲಿಯುವ ಕಾರ್ಯಗಳಲ್ಲೂ ತೊಡಗಿತು. ಕಮ್ಯೂನಿಸ್ಟ್ ಕೆಂಪು ಸೇನೆಗೂ, ಕೋಮಿಂಟಾಂಗ್ ಸೇನೆಗೂ ಅನೇಕ ವೇಳೆ ಭಾರಿ ಕದನಗಳು ನಡೆದು, ಕೊನೆಗೆ ಕೋಮಿಂಟಾಂಗ್ ದೇಶದಿಂದ ಕಾಲ್ತೆಗೆಯಬೇಕಾಯಿತು. ಈಗ ಅದು ಫಾರ್ಮೋಸಾದಲ್ಲಿ ಚಿಯಾಂಗ್-ಕೈ-ಷೇಕ್‌ನ ರಾಜಕೀಯ ಪಕ್ಷವಾಗಿ ಪ್ರತಿಗಾಮಿ ಚಟುವಟಿಕೆಗಳಲ್ಲಿ ತೊಡಗಿದೆ.)

೧೯೪೯ರ ಅಕ್ಟೋಬರ್‌ನಲ್ಲಿ ಜನತಾ ಸರ್ಕಾರವು ಸ್ಥಾಪನೆಯಾದ ನಂತರ ಜನರ ಜೀವನಮಟ್ಟ ಸ್ವಲ್ಪ ಉತ್ತಮಗೊಂಡು ಹೊಟ್ಟೆ ಬಟ್ಟೆಗೆ ಅನುಕೂಲವಾಯಿತೆಂಬುದು ಎಲ್ಲರೂ ಒಪ್ಪುವ ಮಾತಾಗಿತ್ತು. (ಅನೇಕ ಕ್ರಾಂತಿ, ಮರುಕ್ರಾಂತಿಗಳಾದ ನಂತರ, ೧೯೪೯ರಲ್ಲಿ ಚೀನೀ ಜನತೆಯ ಕ್ರಾಂತಿ ಸಂಪೂರ್ಣವಾಗಿ ಯಶಸ್ವಿಯಾಯಿತು. ಕಮ್ಯೂನಿಸ್ಟ್ ಪಾರ್ಟಿಯ ನೇತೃತ್ವದಲ್ಲಿ ಎಲ್ಲ ದೇಶಪ್ರೇಮಿ ಪಕ್ಷಗಳೂ ಒಂದಾಗಿ, ನಿಜ



ಕೊಮಿಂಟಾಂಗ್, ಜಮಿನ್ದಾರ ಮತ್ತು ಲಂಚಕೋರ ಅಧಿಕಾರಿಗಳ ಸುಲಿಗೆಗೆ ಸಿಲುಕಿ ರೈತರು ನರಳುತ್ತಿದ್ದರು.

ವಾದ ಪ್ರಜಾಸತ್ತಾತ್ಮಕ ಜನತಾ ಸರ್ಕಾರವು ೧೯೪೯, ಅಕ್ಟೋಬರ್ ೧ರಲ್ಲಿ ಸ್ಥಾಪಿತವಾಯಿತು. ಮಾವೋ-ಟ್ಸೆ-ಟುಂಗ್, ಈ ಸರ್ಕಾರದ ಅಧ್ಯಕ್ಷರು. ಅಮೆರಿಕ ಮತ್ತು ಕೆಲವು ಅದರ ಹಿಂಬಾಲಕ ಸಣ್ಣ ರಾಷ್ಟ್ರಗಳನ್ನುಳಿದು, ಬೇರೆ ಎಲ್ಲಾ ರಾಷ್ಟ್ರಗಳೂ ಈ ಸರ್ಕಾರಕ್ಕೆ, ನಿಜವಾದ ಚೀನೀ ಜನತೆಯ ಪ್ರಾತಿನಿಧಿಕ ಸರ್ಕಾರವೆಂದು ಮನ್ನಣೆಯಿತ್ತಿವೆ.) ಪುಂಡರ ಹಾವಳಿ ತಪ್ಪಿತಲ್ಲದೆ ಕಂದಾಯವೂ ಕಡಿಮೆಯಾಯಿತು. ಅಲ್ಲಲ್ಲಿ ಸರ್ಕಾರಿ ಧಾನ್ಯದ ಡಿಪೋಗಳು ತೆರೆಯಲ್ಪಟ್ಟವು. ಇದರಿಂದ ರೈತರು ತಮ್ಮ ಧಾನ್ಯ ರೂಪದ ಕಂದಾಯವನ್ನು *೭೦ ಲೀ ದೂರವಿರುವ ಪಟ್ಟಣಗಳಿಗೆ ತೆಗೆದು ಕೊಂಡು ಹೋಗುವುದು ತಪ್ಪಿ, ೨೦ ಲೀ ಮಾತ್ರ ಹೋಗಬೇಕಾಯಿತು. ಇವೆಲ್ಲಕ್ಕಿಂತ ಮುಖ್ಯವಾಗಿ 'ಯಜಮಾನ-ಜಮಿಾನ್ದಾರ'ರ ಕೋಡುಗಳು ಮುಕ್ಕಾದುವು. ಗುತ್ತಿಗೆಗಾಗಿ ರೈತರಿಂದ ಪಡೆದ ಮುಂಗಡದ ಹಣವನ್ನು ಅವರು ವಾಪಸು ಕೊಡಬೇಕಾಯಿತು. ಬಡವರ ತಲೆಯನ್ನು ಹೊಡೆದು ಕೂಡಿಟ್ಟ ಜಮಿಾನ್ದಾರರ ಭಾರಿ ಗಂಟು ಸ್ವಲ್ಪವಾದರೂ ಕರಗಿತು. ಕೆಲವು ರೈತರಿಗೆ ದವಸವೂ, ಮತ್ತೆ ಕೆಲವರಿಗೆ ಕೈ ಮೇಲೆ ಹಣವೂ ದೊರೆಯಿತು. ಸ್ವಲ್ಪವೂ ಜಮಿಾನಿಲ್ಲದ ರೈತರನ್ನು ಬಿಟ್ಟು, ಉಳಿದವರಿಗೆಲ್ಲ ಸ್ವಲ್ಪ ಚೇತರಿಸಿಕೊಳ್ಳುವಂತಾಯಿತು. ಹಿಂದೆ ನಿರ್ಗತಿಕರಾಗಿದ್ದ ರೈತರು ಈಗ ದೊರೆತ ಹಣದಿಂದ ಪಟ್ಟಣಕ್ಕೆ ಹೋಗಿ ಚಿಲ್ಲರೆ ಅಂಗಡಿ ಇಟ್ಟರು, ಅಥವಾ, ಹೊಸದಾಗಿ ಭೂಮಿಕೊಂಡರು. ಶತಮಾನಗಳಿಂದ ಹೊತ್ತ ಭಾರ ಸ್ವಲ್ಪ ಹಗುರವಾದಂತಾಯಿತು. ಇದರಿಂದ "ಇನ್ನೇನು, ಎಲ್ಲವೂ ಸರಿಹೋಯಿತು" ಎಂದು ಕೆಲವರು ಭ್ರಾಂತಿಗೊಳಗಾದರು. "ಜಮಿಾನ್ದಾರನು ಕೆಳಗೆ ಬಿದ್ದಿದ್ದಾನೆ. ಇನ್ನೇಕೆ ಅವನ ಮೊಣಕಾಲು ಮುರಿಯಬೇಕು"; ಅಥವಾ "ಕಾಲಬದಲಾಯಿಸಿದೆ" ಸ್ವಲ್ಪಸ್ವಲ್ಪವಾಗಿ ಉತ್ತಮಸ್ಥಿತಿ ಬರಬಹುದು. ಏಕೆ ದುಡುಕ ಬೇಕು" ಎಂದು ಕೊಂಡರು. ೧೯೨೭ರ ಕರಾಳ ದೃಶ್ಯಗಳು ಆಗಾಗ್ಗೆ ಜ್ಞಾಪಕಕ್ಕೆ ಬರುತ್ತಿದ್ದವು. (೧೯೨೭ರಲ್ಲಿ ಚೀನಾದಲ್ಲಿ ಒಂದು

---

*೧ಲೀ: ೬೩೩ ಗಜಗಳು—೧/೩ ಮೈಲಿಗಿಂತ ಸ್ವಲ್ಪ ಹೆಚ್ಚು.

ಸಣ್ಣ ಕ್ರಾಂತಿಯಾಗಿ ಜನತಾ ಸೇನೆಗೆ ಸ್ವಲ್ಪ ಸಮಯದವರೆಗೆ ಜಯಲಭಿಸಿತು. ಆಗ ಕೆಲವು ಪ್ರದೇಶಗಳಲ್ಲಿ ನಿಜವಾದ ಜನತಾ ಸರ್ಕಾರಗಳೇರ್ಪಟ್ಟು ಜನರಿಗೆ ಸ್ವಲ್ಪ ಮಟ್ಟಿಗೆ ಅನುಕೂಲವಾಯಿತು. ಆದರೆ, ಕೆಲವೇ ತಿಂಗಳುಗಳಲ್ಲೇ, ಪ್ರತಿಗಾಮಿಶಕ್ತಿಗಳ ಕೈಮೇಲಾಗಿ ಪುನಃ ಜಮಿಾನ್ದಾರರ ಆಡಳಿತವೇ ಏರ್ಪಟ್ಟು ಜನರ ಪಾಲಿಗೆ ನರಕ ಜೀವನವೇ ಗತಿಯಾಯಿತು. ಜಮಿಾನ್ದಾರರು, ಕ್ರಾಂತಿಯಲ್ಲಿ ಭಾಗವಹಿಸಿದವರ ಮೇಲೆ ಸೇಡುತೀರಿಸಿಕೊಳ್ಳಲು, ಅಂತಹ ವ್ಯಕ್ತಿಗಳನ್ನು ಚಿತ್ರಹಿಂಸೆಗೆ ಗುರಿಮಾಡಿ ಕೊಂದಿದ್ದಲ್ಲದೆ, ಇಡೀ ಹಳ್ಳಿಗಳನ್ನೆ, ಜಪಾನೀ ಸೈನಿಕರ ಸಹಾಯದಿಂದ ಲೂಟಿಮಾಡುತ್ತಿದ್ದರು.) ಆಗ, ಹಿಂದಿನಂತೆ ಎಲ್ಲಿ ಪುಃನ ಜಮಿಾನ್ದಾರರ ಆಳ್ವಿಕೆ ಬರುತ್ತದೋ ಎಂದು ಹೆದರುತ್ತಿದ್ದರು.

ಹೆಗಲೇರಿದ್ದ ಜಮಿಾನ್ದಾರರು ಕೆಳಗೆ ಬೀಳುವುದು ಅವರ ಸ್ವಭಾವಕ್ಕೇ ವಿರುದ್ಧವಾಗಿತ್ತು. ಆದರೂ ಮೇಲೆಮೇಲೆ ಉತ್ತಮರಾದಂತೆ ಮತ್ತು ನಮ್ರರಾದವರಂತೆ ನಟನೆ ಮಾಡುತ್ತಿದ್ದರು. ಉದಾಹರಣೆಗೆ, ಪ್ರತಿವರ್ಷವೂ ಏಪ್ರಿಲ್‌ನಲ್ಲಿ ಪೂರ್ವಿಕರ ಸಮಾಧಿಯನ್ನು ಪೂಜಿಸುವ ಪಿತೃ ಪಕ್ಷದ ಹಬ್ಬದ ದಿನ ಜಮಿಾನ್ದಾರರು ರೈತರನ್ನುದ್ದೇಶಿಸಿ ಭಾಷಣ ಮಾಡುವುದು ಹಿಂದಿನಿಂದ ವಾಡಿಕೆಯಾಗಿ ಬಂದಿತ್ತು. ಆದರೆ, ಈ ವರ್ಷ ಯಾವ ಜಮಿಾನ್ದಾರನೂ ಹಾಗೆ ಮಾಡಲು ಮುಂಬರಲಿಲ್ಲ. ಅಷ್ಟೇ ಅಲ್ಲ, ಹಿಂದೆ, ಅವಿಧೇಯತೆಗೆ ದೊರಕುವ ಶಿಕ್ಷೆ ಎಂದು ಎಚ್ಚರಿಸಲು 'ತಪ್ಪಿತಸ್ಥ' ಕೂಲಿಯವರನ್ನು ಚೀಲದಲ್ಲಿ ತುಂಬಿ ಬಾಯಿ ಕಟ್ಟಿಸಿ ಹೊಡೆಯುತ್ತಿದ್ದರು. ಈ ಪದ್ಧತಿಯೂ ಈ ವರ್ಷ ತಪ್ಪಿತು. ರೈತರು ಈ ಸಂದರ್ಭದಲ್ಲಿ ತಮ್ಮ ಜಮಿಾನ್ದಾರರಿಗೆ ವಾರ್ಷಿಕ ಕಂದಾಯ ಕೊಡುವುದರ ಜೊತೆಗೆ ತರಕಾರಿ, ಟೀ, ಕಾಳು ಮತ್ತು ಕೋಳಿ ಮೊದಲಾದವುಗಳನ್ನು ಕಾಣಿಕೆಯಾಗಿ ಸಲ್ಲಿಸಬೇಕಾಗಿತ್ತು. ಇದಲ್ಲದೆ ಮಾರಿಯನ್ನು ಮನೆಗೆ ಕರೆದಂತೆ ಗುತ್ತಿಗೆದಾರರು ಜಮಿಾನ್ದಾರರನ್ನು ಔತಣಕ್ಕೆ ಕರೆಯಬೇಕಾಗಿತ್ತು. ಅವರನ್ನು ಕರೆತರಲು ಪಲ್ಲಕ್ಕಿಗಳನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಇವರು ಕರೆಯುವುದು ಹೆಚ್ಚಲ್ಲ, ಅವರು ಬರಲು-ಕೃಪೆ-ಮಾಡಿದರೆ, ಅದು ಗುತ್ತಿಗೆದಾರನ ಪೂರ್ವಜನ್ಮದ

ಪುಣ್ಯ! ಆದರೆ ಈ ವರ್ಷ ಸಮಾಚಾರ ತಲೆಕೆಳಗಾಯಿತು. ಕಾಣಿಕೆಗಳನ್ನು "ದಯವಿಟ್ಟು ನೀವೇ ಇಟ್ಟುಕೊಳ್ಳಿ" ಎಂದು ಹಲ್ಲುಬಿಡುತ್ತಿದ್ದರು. ಕೆಲವು ಕುಟಿಲ ಜಮೀನ್ದಾರರು ತಾವೇ ಬಹುಮಾನಗಳನ್ನು ತಮ್ಮ ಕೆಲಸದವರಿಗೆ ಕೊಟ್ಟು ತಮ್ಮ ವಿರುದ್ಧ ಅವರು ಹೋಗದಂತೆ ಮಾಡಲೂ ಪ್ರಯತ್ನಿಸಿದರು. ಅನೇಕ ಜಮೀನ್ದಾರರು ತಮ್ಮ ಗುತ್ತಿಗೆದಾರರಿಗೆ ತಾವೇ ಆತಿಥ್ಯ ಕೊಡಲು ಮುಂಬಂದರು.

೧೯೨೭ನ್ನು ಜಮೀನ್ದಾರರೂ ಮರೆತಿರಲಿಲ್ಲ. ಅವರಿಗೂ ಚರಿತ್ರೆ ವೃತ್ತದಲ್ಲಿ ಸುತ್ತುವಂತೆ ತೋರಿತು. ರೈತರ ಮೇಲೆ ತಮ್ಮ ಸೇಡು ತೀರಿಸಿಕೊಳ್ಳಬಹುದಾದ ದಿನ ಪುನಃ ಬಂದೇ ಬರುತ್ತದೆಂದು ಇದಿರು ನೋಡುತ್ತಿದ್ದರು. ಆ ದಿನಕ್ಕಾಗಿ ಕಾಯುತ್ತಾ ಸುಮ್ಮನೆ ಕುಳಿತಿರಲಿಲ್ಲ. ತಮ್ಮ ಗುರಿಸಾಧನೆಗೆ ಅವಿಶ್ರಾಂತಶ್ರಮದಿಂದ, ಕುತಂತ್ರದಿಂದ ನಾಗರಹಾವಿನ ಮತ್ಸರದಿಂದ ಸಂಚು ಮಾಡುತ್ತಿದ್ದರು.

* * * * *

ಹಳ್ಳಿಯವರಿಗೆ 'ಭೂಸುಧಾರಣೆ'ಯ ಸುದ್ದಿಯನ್ನು ನೇರವಾಗಿ ಮುಟ್ಟಿಸಿದವರು ಪಟ್ಟಣದ ಟೆಲಿಫೋನ್ ಕಾರ್ಖಾನೆಯ ಕೆಲವು ಕೆಲಸಗಾರರು

ಅಕ್ಟೋಬರ್ ತಿಂಗಳ ಮಧ್ಯದಲ್ಲಿ ಆಚರಿಸುವ 'ಚುಂಗ್‌ಯಾಂಗ್' ಹಬ್ಬಕ್ಕೆ ಸ್ವಲ್ಪದಿನಗಳಿವೆಯೆನ್ನುವಾಗಲೇ ಸಿೞಲು ಹಳ್ಳಿಯ ಹೊಲದ ಪಕ್ಕದ ಕಾಲುದಾರಿಯ ಬಳಿ ಜನರು ಒಂದು ಹೊಸ ದಿಗಂತವನ್ನು ಕಾಣಬಹುದಿತ್ತು. ಗ್ರಾಮದ ಉತ್ತರದ ಗಡಿಯಾದ ಪಿರ್ಜ ನದಿಯ ದಡದ ಉದ್ದಕ್ಕೂ ಕಾಣಿಸಿದ ಟೆಲಿಫೋನ್ ಕಂಬಗಳ ಸಾಲೇ, ಈ ಹೊಸದಿಗಂತ!

ಒಂದು ದಿನ ನವಂಬರ್ ತಿಂಗಳ ಪ್ರಾರಂಭದಲ್ಲಿ, ಸುಮಾರು ೩೦ ಕಂಬಗಳನ್ನಿಟ್ಟುಕೊಂಡು, ನಾಲ್ವರು ಸಮವಸ್ತ್ರಧಾರಿಗಳಾದ ಕೆಲಸಗಾರರು ಕುಳಿತ್ತಿದ್ದ ದೋಣಿಯೊಂದು ನದಿಯ ದಕ್ಷಿಣ ದಡದ ಕಡೆಗೆ ದಾಟಿ ಬರುತ್ತಿತ್ತು. ದಿಬ್ಬದಮೇಲೆ ಮರ ಕಡಿಯುತ್ತಿದ್ದ ಫು-ಚುವಾನ್‌ನು, ಅಂಬಿಗನು

ದೋಣಿಯನ್ನು ನಡಸಲು ಮುಕ್ಕರಿಯುತ್ತಿದ್ದುದನ್ನು ನಿಡುಗುಣ್ಣಿನಿಂದ ನೋಡಿದನು. ದೋಣಿ ದಡ ಸೇರಿತು. ಚುವಾನನಿಗೆ ಇನ್ನು ಹೆಚ್ಚು ಕಾಲ ಕುತೂಹಲವನ್ನು ತಡೆಯಲಾಗಲಿಲ್ಲ. ಇಳಿಜಾರಿನಲ್ಲಿ ಓಡುತ್ತಾ



ಟೆಲಿಫೋನ್ ಕಂಬಗಳ ಸಾಲಿನ ಹೊಸ ದಿಗಂತ.

ನದೀತೀರವನ್ನು ಸೇರಿ “ ಷುರ್ವಾ-ಚುರ್ವಾ, ಷುರ್ವಾ-ಚುರ್ವಾ, ಯಾತ ಕ್ಕೋಸ್ಕರ ಇಷ್ಟು ಜನರು ?” ಎಂದು ಅಂಬಿಗನನ್ನು ಕೇಳಿದನು.

‘ಟೆಲಿಫೋನ್‌ಕಂಪನಿ’ಯ ಬಿಲ್ಲೆಯನ್ನು ಭುಜದಮೇಲೆ ಹಾಕಿದ್ದ ಸಮವಸ್ತ್ರಧಾರಿ ಕೆಲಸಗಾರನೊಬ್ಬ ಅಂಬಿಗನು ಉತ್ತರಕೊಡುವ ಮೊದಲೇ ದೊಡ್ಡದಾಗಿ ಕೂಗಿದನು.—

“ಯಾತಕ್ಕೋಸ್ಕರವೇ ? ಭೂಸುಧಾರಣೆಗೋಸ್ಕರ. ಉಳುವ ರೈತ ರನ್ನು ಜಮಿಾನಿನ ಒಡೆಯರನ್ನಾಗಿ ಮಾಡುವುದೇ ಭೂಸುಧಾರಣೆ.”

ಕೆಲಸಗಾರರು ಕಂಬಗಳನ್ನು ದಡಕ್ಕೆ ಸಾಗಿಸಲು ಅನುವಾದರು. ಆ ಟೆಲಿಫೋನ್ ಕಂಬಗಳು ತನಗೆ ಸಂಬಂಧಿಸಿವೆ, ಅವು ತನ್ನ ಪುರೋಭಿವೃದ್ಧಿ ಗೋಸ್ಕರವೇ ಎಂದು ಫು-ಚುವಾನನಿಗೆ ಅರಿವಾದ ಕೂಡಲೇ ಕೊಡಲಿ, ಮಂಕರಿಗಳನ್ನು ಒಗೆದು, ತಾನೂ ಕಂಬಗಳನ್ನು ಸಾಗಿಸುವ ಕೆಲಸದಲ್ಲಿ ನೆರ ವಾದನು. ಇನ್ನು ಎಂಟು ದಿನಗಳಲ್ಲಿ ಭೂಸುಧಾರಣೆ ದಳದವರು ಬರುವವರಿ ದ್ದರು. ಅಷ್ಟರಲ್ಲೇ ಟೆಲಿಫೋನ್ ತಂತಿ ಹಾಕುವ ಕೆಲಸವನ್ನು ಶೀಘ್ರವಾಗಿ ಪೂರೈಸಬೇಕಾಗಿತ್ತು. ಆ ಕೆಲಸಗಾರರು ನಿರಂತರವಾಗಿ ಆ ವಿಷಯ ವಾಗಿಯೇ ಮಾತನಾಡುತ್ತಿದ್ದರು.

“ನೀವು ನಾಲ್ಕೇ ಮಂದಿ ಅಷ್ಟೇನೇ ?” ಫು-ಚುವಾನನು ಕೇಳಿದನು.

“ಇಲ್ಲ. ಒಂದು ಗುಂಪಿನಲ್ಲಿ ನಾಲ್ಕುಜನ” ಎಂದು ಕೆಲಸದವನು ಹೇಳಿದನು. “ಹುಯಿಲುಂಗ್ ತಾಲ್ಲೂಕಿನಲ್ಲಿ ಒಟ್ಟು ಒಂಬತ್ತು ಹಳ್ಳಿ ಗಳಿವೆ. ಒಂದು ಹಳ್ಳಿಗೆ ನಾಲ್ಕು ಜನವಾದರೆ, ಒಂಭತ್ತು ಹಳ್ಳಿಗೆ ಎಷ್ಟು ? ಮೂವತ್ತಾರು ಅಲ್ಲವೆ ?”

ಫು-ಚುವಾನನಿಗೆ ಸ್ವಲ್ಪ ಅರ್ಥವಾದಂತಾಯಿತು. ದೇಶಾಂತರ ತಿರುಗಿ, ತಿಳುವಳಿಕೆಯುಳ್ಳವನಂತೆ ಇವನು ಕಂಡು ಬಂದರೂ, ಕೊನೆಯ ದಾಗಿ ಒಂದು ಪ್ರಶ್ನೆಯನ್ನು ಕೇಳದೆ ಬಿಡಲಿಲ್ಲ : “ಈ ಟೆಲಿಫೋನ್ ಎಲ್ಲಿಗೆ ಹೋಗುತ್ತೆ ?”

ಇದೇನು ಅಂಥ ಮೂರ್ಖತನದ ಪ್ರಶ್ನೆಯಾಗಿರಲಿಲ್ಲ. ಕಂದಾಯ ಸಲ್ಲಿಸಲು ಅವನು ಪಟ್ಟಣಕ್ಕೆ ಅನೇಕ ಬಾರಿ ಹೋಗಿದ್ದನೆಂಬುದೇನೋ

ನಿಜ. ಆದರೆ ಅಲ್ಲಿ ಹತ್ತು ದಿನಕ್ಕೊ ಮಾರಿ ಒಮ್ಮೆಯೂ ಇರಲಿಲ್ಲ. ಮತ್ತು ಟೆಲಿಫೋನನ್ನು ಮುಟ್ಟಿಯೂ ಇರಲಿಲ್ಲ, ನೋಡಿಯೂ ಇರಲಿಲ್ಲ.

"ಇನ್ನೆಲ್ಲಿಗೆ, ಜಿಲ್ಲಾ ಕೇಂದ್ರಕ್ಕೆ—ಸ್ಥಳೀಯ ಭೂಸುಧಾರಣಾ ಸಮಿತಿಗೆ—ಪ್ರಾಂತೀಯ ಭೂ ಸುಧಾರಣಾ ಸಮಿತಿಗೆ—ಕೊನೆಗೆ ಅಧ್ಯಕ್ಷ ಮಾವೋರವರ ತನಕವೂ ಹೋಗುತ್ತೆ." (ಮಾವೋ-ಟ್ಸೆ-ಟುಂಗ್, ಇಂದಿನ ಜನತಾ ಚೀಣಾ ಸರ್ಕಾರದ ಅಧ್ಯಕ್ಷರು. ಕ್ರಾಂತಿಯನ್ನು, ಯಶಸ್ವಿಯಾಗಿ ನಡೆಸಿದ ಮಹಾನಾಯಕರು. ಚೀನೀ ಕಮ್ಯೂನಿಸ್ಟ್ ಪಾರ್ಟಿಯ ಹುಟ್ಟು ಮತ್ತು ಬೆಳವಣಿಗೆಗೆ ಇವರೇ ಕಾರಣ ಭೂತರು. ಮಾರ್ಕ್ಸ್-ಎಂಗೆಲ್ಸ್‌ರ ತತ್ವ ದೃಷ್ಟಿಯಿಂದ ಚೀನಾದೇಶದ ಸಮಸ್ಯೆಗಳನ್ನು ವಿಶ್ಲೇಷಿಸಿ, ವಿಮರ್ಶಿಸಿ, ಅನೇಕ ತಾತ್ವಿಕ ಉದ್ಗ್ರಂಥಗಳನ್ನು ರಚಿಸಿದ್ದಾರೆ. ಕಳೆದ ವರ್ಷ (೧೯೫೩ರಲ್ಲಿ) ಇವರ ಅರವತ್ತನೆಯ ಹುಟ್ಟಿದ ಹಬ್ಬ ವಿಜೃಂಭಣೆಯಿಂದ ಪ್ರಪಂಚದ ನಾನಾ ಭಾಗಗಳಲ್ಲಿ ಆಚರಿಸಲ್ಪಟ್ಟಿತು.)

ಕೆಲಸದವನು ತನ್ನ ಸಂಗಡಿಗ ರೈತನನ್ನು ಕನಿಕರದಿಂದ ನೋಡಿ ಮಾತನ್ನು ಮುಂದುವರೆಸಿದನು. "ಕೋಮಿಂಟಾಂಗ್ ಆಡಳಿತದ ಇಪ್ಪತ್ತು ವರ್ಷಗಳ ಕಾಲವೂ ಟೆಲಿಫೋನ್ ಯೋಜನೆಯು ನಗರದಲ್ಲಿ ಮಾತ್ರ ಇತ್ತು. ಈಗ ನಾವು ನಗರವನ್ನು ಬಿಟ್ಟು ಹಳ್ಳಿಗೆ ಬಂದಿದ್ದೇವೆ. ಜಮೀನ್ದಾರಿ ವರ್ಗದ ನಿರ್ಮೂಲನ ಕಾರ್ಯದಲ್ಲಿ ನಿಮಗೆ ನೆರವಾಗಲು ಬಂದಿದ್ದೇವೆ."

ಫು-ಚುವಾನನ ತಲೆಯಲ್ಲಿ ಬಿರುಗಾಳಿ ಎದ್ದಿತು. ಕಂಬಗಳನ್ನು ದಡಕ್ಕೆ ಸಾಗಿಸಿದ್ದು ಮುಗಿದ ಕೂಡಲೇ ಕೊಡಲಿಯನ್ನು ಕೈಗೆತ್ತಿಕೊಂಡು ಮಂಕರಿಯನ್ನು ಹೆಗಲಿಗೆ ಸಿಕ್ಕಿಸಿಕೊಂಡು ಮನೆಯಕಡೆಗೆ ಹೊರಟನು.

ಯೋಚನಾಮಗ್ನನಾಗಿದ್ದ ಅವನಿಗೆ ದಾರಿಸಾಗಿದುದೇ ಗೊತ್ತಾಗ ಲಿಲ್ಲ. 'ಸಪ್ತಋಷಿ ಮಂಡಲ'ವೆಂಬ ಹೆಸರಿನ ತಗ್ಗಿನಬಳಿ ಬಂದಾಗ ತಲೆ ಎತ್ತಿ ನೋಡಿದನು. ಮುಂದೆ ಮರಗಳ ಗುಂಪಿನ ನಡುವೆ ಮೇಲೆದ್ದು ಕಾಣುತ್ತಿದ್ದ ಪೆಂಗ್-ಎರುವಿನ ಬಂಗಲೆಯನ್ನು ದಿಟ್ಟಿಸಿ ನೋಡಿದನು. ಎರಡನೆಯ ಪೆಂಗ್ ಬುದ್ಧಿಯವರ ಉಪ್ಪರಿಗೆಯ ಮೆಲ್ಛಾವಣಿಯು, ಮನೆಯ ಯಜ

ಮಾನನ ತೋಳುಗಳಂತೆಯೇ ಅಗಲವಾಗಿ ಹರಡಿಕೊಂಡಿತ್ತು. ಈ ಮನೆಯ ಸುತ್ತಲೂ ಸ್ವಲ್ಪ ದೂರದಲ್ಲಿ, ಮಣ್ಣಿನ ಮುರುಕುಲು ಗುಡಿಸಲು ಗಳ ಗುಂಪುಗಳಿದ್ದವು. ಆರನೆಯ ವರ್ಷದಿಂದಲೂ ಫು-ಚುವಾನನು ತನ್ನ ತಂದೆಯೊಂದಿಗೆ ಆಗುಡಿಸಲುಗಳೊಂದರಲ್ಲಿ ವಾಸಿಸುತ್ತಿದ್ದನು. 'ಎರಡನೆಯ ಹುಲಿ ಪೆಂಗ್' ಎಂದು ಹೆಸರುವಾಸಿಯಾದ ಪೆಂಗ್-ಎರುವನ್ನು ಫು-ಚುವಾ ನನು ಅನೇಕ ವೇಳೆ ದ್ವೇಷಿಸುತ್ತಿದ್ದನು. ಅದರಲ್ಲೂ, ಆ ದೊಡ್ಡ ಮನೆ ಯಿಂದ ಅಡಿಗೆಯ ವಾಸನೆ ಬಂದಾಗಲಂತೂ, ಅವನ ಮೈಯೆಲ್ಲಾ ಉರಿಯು ತ್ತಿತ್ತು. ಅವರಿಗೆ ಮೀನು, ಮಾಂಸ ಬೇಕಾದ್ದೆಲ್ಲ! ಇವನಿಗೆ ವರ್ಷವೆಲ್ಲಾ ಆಲೂಗೆಡ್ಡೆಯ ಒಣಗಿದ ಚೂರು! ಆದರೂ, "ಇದೆಲ್ಲ ಹಣೆಯ ಬರಹ" ಎಂದುಕೊಂಡು ಸುಮ್ಮನಾಗುತ್ತಿದ್ದನು. "ಪಡೆದುಕೊಂಡಿರೋದು, ಇಲ್ಲದೇ ಇರೋದು, ಎಲ್ಲಾ ಅದೃಷ್ಟವಿದ್ದ ಹಾಗೆ. ಮನುಷ್ಯನ ಯತ್ನ ಏನು ತಾನೇ ಮಾಡೀತು" ಎಂದು ಫು-ಚುವಾನನ ದೃಢ ನಂಬಿಕೆ. ಈಗ್ಗೆ ಮೂರು ತಿಂಗಳ ಹಿಂದೆ ಅವನಿಗೆ ಅದೃಷ್ಟ ಹೇಗೆ ಒಲಿಯಿತು! ಎರಡನೆಯ ಪೆಂಗ್ ಧಣಿ ಇವನನ್ನು ಕರೆಸಿ ೫ ಟೌ ೭ ಷೆಂಗ್ ಫಲವತ್ತಾದ ಹೊಲವನ್ನು ಭಕ್ಷೀಸಾಗಿ ಕೊಟ್ಟಿದ್ದಲ್ಲದೆ, ಯಜಮಾನನ ಬಂಗಲೆಯ ಹೊರಭಾಗದಲ್ಲಿದ್ದ ಹೆಂಚು ಹೊದಿಸಿದ ಕೊಠಡಿಯನ್ನು ವಾಸಕ್ಕಾಗಿ ಬಿಟ್ಟುಕೊಟ್ಟಿರಲಿಲ್ಲವೇ? ನಿಜಕ್ಕೂ, ಅವನಿಗೆ 'ಅದೃಷ್ಟ' ಒಲಿದಿತ್ತು!

ಇಂದು ಆ ಕಂಬಗಳನ್ನು ಸಾಗಿಸುವುದರಲ್ಲಿ ನೆರವಾಗುವುದರ ಮೂಲಕ ಸ್ವಾಮಿದ್ರೋಹ ಬಗೆದಿದ್ದೇನೆಂಬ ಯೋಚನೆ ಬಂದು ಫು-ಚುವಾನನಿಗೆ ಸಿಡಿಲು ಬಡಿದಂತಾಯಿತು. ಅಲ್ಲದೆ, ವಿಮೋಚನೆಯಾದ ಮೇಲೆ ಎರಡ ನೆಯ ಪೆಂಗ್ ಬುದ್ಧಿಯವರೂ ರೈತರ ಬಗ್ಗೆ ವಿಶ್ವಾಸವುಳ್ಳವರಂತೆ ತೋರಿ ದ್ದರು. ಪೆಂಗ್ ದೊರೆಗಳಿಲ್ಲದಿದ್ದರೆ ತಾನು ಈ ಪ್ರಪಂಚದಲ್ಲಿ ಬದು ಕುವ ಹಾಗೇ ಇರಲಿಲ್ಲ, ಎಂದು ಅವನು ತಿಳಿದಿದ್ದನು. ಹ್ಯೂನಾನ್ ಪ್ರಾಂತ್ಯದ ಮುಕ್ಕಾಲು ಪಾಲು ಹಳ್ಳಿಗಳೆಲ್ಲ ಬಲಿಷ್ಠವಾದ ಪಾಳೆಪಟ್ಟು ಗಳಂತಿದ್ದವು. ಕೆಲವೇ ಪ್ರಮುಖ ಜಮೀನ್ದಾರಿ ವಂಶಸ್ಥರು ಹಳ್ಳಿಗಳನ್ನು ಹಂಚಿಕೊಂಡು ಸ್ವೇಚ್ಛೆಯಿಂದ ಆಳುತ್ತಿದ್ದರು. ಸಿಃಲು ಹಳ್ಳಿಯಲ್ಲಿ ಅಂತಹ

ಮೂರು ಪಾಳೆಗಾರ ವಂಶಸ್ಥರಿದ್ದರು. ಇವರು, 'ದೊಡ್ಡ ಮನೆಲೋ', 'ಲೀ ತೋಟ' ಮತ್ತು 'ಸಪ್ತಋಷಿಮಂಡಲ' ಎಂಬುದಾಗಿ ಹಳ್ಳಿಯನ್ನು ಮೂರು ಭಾಗವಾಗಿ ವಿಭಜಿಸಿ, ಒಬ್ಬೊಬ್ಬರೂ ಒಂದೊಂದರ ಮೇಲೆ ಅಧಿಕಾರ ನಡೆಸುತ್ತಿದ್ದರು. ಆದರೆ ಆ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ರೈತ-ಕೂಲಿಕಾರರು ಮಾತ್ರ ಬೇರೆ-ಬೇರೆ ಕುಲಕ್ಕೆ ಸೇರಿದವರಾಗಿದ್ದರು. ರೈತರು ಒಂದಾಗದಿರಲೆಂದು ಜಮೀನ್ದಾರರೇ ಈ ಏರ್ಪಾಟುಮಾಡಿದ್ದರು. 'ಸಪ್ತಋಷಿ ಮಂಡಲ'ಕ್ಕೆ ಸ್ವಲ್ಪ ದೂರದಲ್ಲಿ ಒಂದು ಪೇಟೆಯ ಬೀದಿಯೂ ಇದ್ದಿತು.

ಚುವಾನನು ತನ್ನ ಕೇರಿಗೆ ಬಂದವನೇ ಜನರಿಗೆ ಕಂಬಗಳ ವಿಷಯವನ್ನು ಹೇಳಿದನು. ಮಧ್ಯಾಹ್ನದ ವೇಳೆಗೆ ಈ ಸುದ್ದಿ ಮೂರು ಕೇರಿಗಳಿಗೂ ಹಬ್ಬಿತು. ವಯಸ್ಸಾದ ಮುದುಕರು ತಾತ್ಸಾರದಿಂದಿದ್ದರು. ಏಕೆಂದರೆ ಅವರು ಅನೇಕ ರೀತಿಯ ಬದಲಾವಣೆಗಳನ್ನು ಅನುಭವಿಸಿ ಸಾಕಾಗಿದ್ದರು—ಜಪಾನೀಯರು! ಕೋಮಿಂಟಾಂಗ್ ಸೈನ್ಯ! ಆದರೂ, ಕುತೂಹಲ ಭರಿತರಾಗಿ ದಿಬ್ಬದ ಮೇಲಿದ್ದ ದೇವಸ್ಥಾನದ ಹತ್ತಿರ ನಿಂತು ಕಂಬಗಳ ಕಡೆಗೆ ನೋಡುತ್ತಿದ್ದರು.

ಎಳೆಯರಿಗಂತೂ ಉತ್ಸಾಹವನ್ನು ತಡೆಹಿಡಿಯಲಾಗಲಿಲ್ಲ. ಒಬ್ಬರಾದ ಮೇಲೊಬ್ಬರು ತೋಪಿನ ಮೂಲಕ ನುಸಿದು, ಕಾಲುದಾರಿಯಲ್ಲಿ ಹಾದು, ನದಿಯ ಕಡೆಗೆ ಓಡಿದರು. ಬಿಗಿದ ಪಾದಗಳ ಹಳ್ಳಿಯ ಲೀ-ಅಜ್ಜಿಯೂ ಕೋಲೂರಿಕೊಂಡು ಅವರ ಜೊತೆಗೆ ಹೋದಳು. ಅವಳಿಗೆ ಆಗಲೇ ಐವತ್ತಮೂರು ವಯಸ್ಸಾಗಿತ್ತು. ಆದರೂ ಅವಳ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ. ಎಲ್ಲರೂ ಕೆಲಸಗಾರರ ಮೇಲೆ ಪ್ರಶ್ನೆಗಳ ಸುರಿಮಳೆ ಸುರಿಸಿದರು. ಲೀ-ಅಜ್ಜಿಯೂ, ಮೂಳೆ-ಮೂಳೆ ಬಿಟ್ಟುಕೊಂಡಿದ್ದ ತನ್ನ ಕೈಬೆರಳುಗಳಿಂದ ಕೆಲಸದವನೊಬ್ಬನ ಮೈದಡವುತ್ತಾ ಉದ್ವೇಗದಿಂದ ಹೇಳಿದಳು: "ಅಯ್ಯೋ! ನೀನು ನನ್ನ ಟೆಮಿಂಗನ ಹಾಗೆ ಇದ್ದೀಯೆ. ಅವನೂ ನಿನ್ನಷ್ಟೇ ಎತ್ತರಕ್ಕಿದ್ದನು. ಅಷ್ಟು ಬೆಳೆಯುವವರೆಗೂ ನಾನೇ ಅವನನ್ನು ಸಾಕಿದೆ!" ಹೇಳುತ್ತಾ ಹೇಳುತ್ತಾ ಅವಳ ಉದ್ವೇಗ ಹೆಚ್ಚತೊಡಗಿತು. ಕೊನೆಗೆ ಬಿಕ್ಕಳಿಸಿ ಅತ್ತಳು.

"ಇಲ್ಲ, ಇಲ್ಲ. ಕಣ್ಣೀರು ಕೂಡದು. ಇದು ಅಳುವ ಕಾಲವಲ್ಲ. ನಗುವಕಾಲ." ಕೆಲಸದವನು ಮುದುಕಿಗೆ ಹೇಳಿದನು. "ಇನ್ನೇನೂ ಪ್ರಶ್ನೆಗಳು ಬೇಡಿ. ಈ ಟೆಲಿಫೋನ್, ಭೂಸುಧಾರಣೆಗಾಗಿ. ಈ ಸುಧಾರಣೆಯಿಂದ ನೀವು ರೈತರು ಮುಂಬರುತ್ತೀರಿ. ಜಮೀನ್ದಾರರು ಕೆಳದೂಡಲ್ಪಡುತ್ತಾರೆ. ಅರ್ಥವಾಯಿತೇ ? ಈಗ ಬನ್ನಿ, ನಿಮ್ಮಲ್ಲಿ ಬಲವಾಗಿರುವವರು ಈ ಕಂಬಗಳನ್ನು ನೆಡುವುದಕ್ಕೆ ಸಹಾಯಮಾಡಿ"

ಹೀಗೆ ಹೇಳಿದ ಕೂಡಲೆ ಎಲ್ಲ ರೈತರೂ ಕೆಲಸಕ್ಕೆ ತೊಡಗಿದರು. ಕೆಲವರು ಗುಂಡಿಗಳನ್ನು ತೋಡಿದರು. ಕೆಲವರು ಕಂಬಗಳನ್ನು ಹೊತ್ತರು. ಕೆಲಸಗಾರರು ಆಶ್ಚರ್ಯಪಡುವಂತೆ, ಸೂರ್ಯ ಮುಳುಗುವ ಮುನ್ನವೇ ಎಲ್ಲ ಕೆಲಸವೂ ಮುಗಿದಿತ್ತು.

* * * * *

ಲೀ-ಅಜ್ಜಿಯೂ, ಚುವಾನನ ಕೇರಿಯಲ್ಲೇ ವಾಸಿಸುತ್ತಿದ್ದಳು. ಕೇರಿ ತಲುಪಿದೊಡನೇ, ಎಲ್ಲ ಮನೆಗಳ ಕದ ತಟ್ಟುತ್ತಾ "ಹೇ! ಭೂ-ಸುಧಾರಣೆ! ಭೂಸುಧಾರಣೆ! ನನ್ನ ಮಗ ಟಿ-ಮಿಂಗ್ ಬಂದೇ ಬರುತ್ತಾನೆ" ಎಂದು ಕೂಗುತ್ತಿದ್ದಳು.

ಸಿ-ವುವಿನ ಗರ್ಭಿಣಿ ಹೆಂಡತಿ, ಹಂದಿಗಳನ್ನು ಮನೆಗೆ ಹೊಡೆದುಕೊಂಡು ಬರಲು ಅದೇ ತಾನೇ ಹೊರಗೆ ಹೊರಟಿದ್ದಳು. ಅಷ್ಟರಲ್ಲೇ ಹುಚ್ಚಿಯ ಹಾಗೆ ಲೀ-ಅಜ್ಜಿಯು ಓಡಿಬಂದು, ಮನಸ್ಸಿನ ಉದ್ವೇಗವನ್ನು ತಡೆಯಲಾರದೆ ಅವಳ ಮುಂದೆ ಬಿದ್ದಳು. ಎಲ್ಲಿಯಾದರೂ ಅಪಾಯವಾಗಿರಬಹುದೆಂದು ಶ್ರೀಮತಿ ಸಿ-ವುವಿಗೆ ಗಾಬರಿಯಾಯಿತು. ಮುದುಕಿಯ ಮಗಳಾದ ಚುನ್-ಸಿಂಗ್‌ಳನ್ನು ಕರೆತರುವಂತೆ ತನ್ನ ಸೈನಿಕ-ಪತಿಗೆ ಹೇಳಿ ಕಳುಹಿಸಿ, ಮುದುಕಿಯನ್ನು ನಿಧಾನವಾಗಿ ಎಬ್ಬಿಸಿ, ಒಳಗೆ ಕರೆದುಕೊಂಡು ಹೋಗಿ ಒಂದು ಕಾಲುಮಣೆಯ ಮೇಲೆ ಕೂರಿಸಿದಳು. ನೀರು ಕುಡಿಸಿ ಉಪಚರಿಸಿ, ಮೃದುವಾಗಿ ಮಗುವಿಗೆ ಹೇಳುವಂತೆ, "ಅಜ್ಜಮ್ಮ, ನಿನ್ನ ಮಗ ಇನ್ನು ಬರುವ ಹಾಗಿಲ್ಲ. ನಮ್ಮ ಯಜಮಾನರು ನಿನಗೆ ಹೇಳಲಿ

ಲ್ಲವೇ ? ಅವರು ಹೇಳಿದ್ದು ನಿಜ. ಇನ್ನೂ ಅದೇ ಆಸೆ ಇಟ್ಟುಕೊಂಡಿರ ಬೇಡ. ನಿನ್ನ ಕೈಲಿ ಆ ಉದ್ವೇಗ, ನಿರಾಶೆಗಳನ್ನು ತಡೆಯುವುದಕ್ಕಾಗುವುದಿಲ್ಲ" ಎಂದು ಹೇಳಿದಳು.

" ಏನು ಇನ್ನು ಬರುವುದೇ ಇಲ್ಲವೇ ?" ಮುದುಕಿಯು ಯಾಂತ್ರಿಕ ವಾಗಿ ಉಚ್ಚರಿಸಿದಳು. ಅನಂತರ ಕೀರಲುಧ್ವನಿಯಲ್ಲಿ ಕೂಗುತ್ತಾ ಎಚ್ಚರ ತಪ್ಪಿ ಕಾಲುಮಣೆಯ ಮೇಲಿನಿಂದ ಕೆಳಗೆ ಬಿದ್ದಳು.

ನೆರೆ-ಹೊರೆಯವರೆಲ್ಲಾ ಓಡಿಬಂದರು. ಕುವಾಂಗ್-ಲೀ-ಚಿಕ್ಕಪ್ಪನೂ ಗಡ್ಡವನ್ನು ಬೆರಳಿನಿಂದ ಬಾಚುತ್ತಾ "ಅವಳ ಮಗ ಯುದ್ಧದಲ್ಲಿ ಸತ್ತನೆಂದು ಯಾರೂ ಹೇಳಬೇಡಿ. ಮಗಳಿಗೆ ಇನ್ನೇನು ಮದುವೆ ಆಗಲಿದೆ. ಅಷ್ಟ ರಲ್ಲೇ ಏನಾದರೂ ಆದರೆ, ಆ ಹುಡುಗಿಯ ಗತಿಯೇನು, ಪಾಪ ! "ಎಂದನು

ಆ ಹೊತ್ತಿಗೆ ಮುದುಕಿಯ ಒಬ್ಬಳೇ ಮಗಳು ಚುನ್-ಸಿಂಗಳೂ ಬಂದಳ. ಅವಳು ಇನ್ನೂ ಜಡೆ ಹಾಕಿಕೊಳ್ಳುತ್ತಿದ್ದ ಚಿಕ್ಕ ಹುಡುಗಿ. ತಾಯಿಯ ನಿಸ್ತೇಜ ಮುಖವನ್ನು ಕಂಡೊಡನೇ "ಅಮ್ಮಾ ಅಮ್ಮಾ "ಎಂದು ಗೋಳಾಡತೊಡಗಿದಳು. ಸೀ-ವು, ಮುದುಕಿಯನ್ನು ಎತ್ತಿ ಹಾಸಿಗೆಯ ಮೇಲೆ ಮಲಗಿಸಿದನು.

ಒಂದೆರಡು ಘಳಿಗೆಯಾದ ಮೇಲೆ ಅಜ್ಜಿಯ ಕಣ್ಣೆವೆಗಳು ಆಡಿದವು. ಅವಳ ದೃಷ್ಟಿ ಮೊದಲು ಹರಿದುದು ಮಗಳ ಮೇಲೆ. ಚುನ್-ಸಿಂಗಳ ಕೈಯನ್ನು ಹಿಡಿದು ಮೆಲ್ಲನೆ ತಟ್ಟುತ್ತಾ, ತನ್ನ ಗತಿಯನ್ನು ತಾನೇ ನಿಶ್ಚಯಿಸಿ ಕೊಂಡಂತೆ, "ಅಳಬೇಡ, ಅಳಬೇಡ. ಯಾಕೆ ಚಿಂತೆ" ಎಂದಳು. ಒಳ ಗಿನ ನೋವನ್ನು ಅದುಮಿ ಹಿಡಿಯಲಾಗಲಿಲ್ಲ. "ಅಂತೂ ನಿನ್ನ ಅಣ್ಣ ತೀರಿಹೋದ" ಎಂದು ಕಣ್ಣೀರು ಸುರಿಸಿದಳು. ವ್ಯಸನದಿಂದ ಬಾಯಿ ಕಟ್ಟಿತು, ಮೂಕಳಾದಳು.

ಇದನ್ನು ಕಂಡ ಸೀವುಗೆ ಕೋಪ ಉಕ್ಕಿ ಬಂತು. ಟಿಮಿಂಗ್‌ನನ್ನು ಹೇಗೆ ಮತ್ತು ಯಾರು ಕೊಂದುಹಾಕಿದರೆಂಬುದು ಅವನಿಗೆ ಗೊತ್ತಿತ್ತು. "ಟಿಮಿಂಗ್‌ನಿಗೆ ಏನಾಯ್ತು ಗೊತ್ತೆ ನಿಮಗೆ ?" ಎಂದು ಆರ್ಭಟಿಸಿದನು.

ಅವನ ಕಣ್ಣುಗಳು ಕೆಂಡವನ್ನು ಕಾರುತ್ತಿದ್ದವು. " ಟಿಮಿಂಗ್‌ನನ್ನು ಯಾರು ಕೊಂದದ್ದು ?—-ಆ ಜಮಿನ್ದಾರನಲ್ಲವೆ, ಆ ಗೂಳಿಯಂತಹ ಪೆಂಗ್-ಎರು? ನನ್ನನ್ನು ಬಲಾತ್ಕಾರದಿಂದ ಸೈನ್ಯಕ್ಕೆ ಸೇರಿಸಿ ಗುಂಡಿನ ಬಾಯಿಗೆ ಕಟ್ಟಿರಲಿ ಲ್ಲವೇ ? ಕಮ್ಯುನಿಸ್ಟರು ಇಲ್ಲವೆ ಇದ್ದರೆ ನಾನೆಲ್ಲಿ ಬದುಕಿ ಬರುತ್ತಿದ್ದೆ ? ಅವರು ನನ್ನನ್ನು ಸೆರೆಹಿಡಿದರೂ ಕೈದಿಯಂತೆ ಕಾಣಲಿಲ್ಲ. ತಮ್ಮ ಸ್ವಂತ ಸಹೋದರನಂತೆ ಕಾಪಾಡಿದರು. ಇರಲಿ, ನಾನು ಎಂತಹವನೆಂಬುದನ್ನು ಪೆಂಗ್-ಎರುವಿಗೆ ತೋರಿಸಲೇಬೇಕು. ಇಲ್ಲದಿದ್ದಲ್ಲಿ ನಾನು ಗಂಡಸೇ ಅಲ್ಲ." ಸಿೞವು, ಸೈನ್ಯದಿಂದ ವಾಪಸು ಬಂದಂದಿನಿಂದ ಹಳ್ಳಿಯ ಪಾರುಪತ್ತೆಗಳಲ್ಲಿ ಹೆಚ್ಚು ಆಸಕ್ತಿ ವಹಿಸಿದ್ದನು. ಅನೇಕ ಕಾರುಬಾರುಗಳಲ್ಲಿ ಮುಂದಾಳಾಗಿ ಕೆಲಸ ಮಾಡಿದ್ದರಿಂದ ಜನರು ಅವನನ್ನು ಕುಲದ ಯಜಮಾನನನ್ನಾಗಿ ಆರಿಸಿದ್ದರು.

ಪೆಂಗ್‌ಎರು! ಆ ಹೆಸರು ರೈತರ ಎದೆಯಲ್ಲಿ ಭಯ ಮತ್ತು ದ್ವೇಷ ವನ್ನು ತುಂಬುತ್ತಿತ್ತು. ಪೆಂಗ್ ಎರಡನೆಯ ಹುಲಿ! ಜಪಾನೀಯರು ಹಳ್ಳಿ ಯನ್ನು ಆಕ್ರಮಿಸಿದ್ದಾಗ, ಅವನಣ್ಣ ಪೆಂಗ್‌ಟಿಂಗ್, ಗಂಡಸರು-ಹೆಂಗಸರ ನ್ನೆಲ್ಲಾ ಅವರಿಗಾಗಿ ಯುದ್ಧಕ್ಕೆ ಹಿಡಿಸಿದ್ದನು. ಜಪಾನೀಯರು ಸೋತ ಮೇಲೆ ಅವನ ತಮ್ಮ ಪೆಂಗ್, ಎರಡನೇ ಹುಲಿ. ಅವನ ಸರದಿಯನ್ನು ತೆಗೆದುಕೊಂಡು ಚಿಯಾಂಗ್‌ನ ಪರವಾಗಿ ನಾನಾತರದ 'ಕಾಣಿಕೆ' ಗಳನ್ನು ವಸೂಲ್ಮಾಡುತ್ತಾ ದೃಢಕಾಯರಾದ ಯುವಕರನ್ನು ಬಲಾತ್ಕಾರವಾಗಿ ಸೈನ್ಯಕ್ಕೆ ಸೇರಿಸುವುದರ ಮೂಲಕ ಹಳ್ಳಿಯ ರೈತರನ್ನು ಅರೆದು ತಿನ್ನು ತ್ತಿದ್ದನು.

ದೇಶವು ದಾಸ್ಯವೃತ್ತಿಯಿಂದ ಬಿಡುಗಡೆಯಾದಮೇಲೆ, ಯಮಕಿಂಕರ ನಾದ ಪೆಂಗ್‌ಎರುವಿನ ಬೇರು ಕತ್ತರಿಸಿದಂತಾಗಿತ್ತು. ಸ್ವಲ್ಪ ಸಮಯದ ತನಕ ತನ್ನನ್ನೇ ಆಶ್ರಯಿಸಿ ಹಿಂಬಾಲಿಸಿದ್ದ ಜನರ ಸಹಾಯದಿಂದ ತನ್ನ ಹಳೆಯ ದರ್ಪವನ್ನುಳಿಸಿಕೊಳ್ಳಲು ಪ್ರಯತ್ನಪಟ್ಟ. "ಸುಂಡನಿಗೆ ಸಿರಿಬಂದು ಗಂಜಿ ಗುಂಡಿಗೆ ಬಿತ್ತು"-ಅಂತ ಯಾಕೆ ಮೆರೀತೀರಿ. ಇದೇನೂ ಒಳ್ಳೇದ ಕ್ಕಲ್ಲ. ನಾವೆಲ್ಲ ತುಂಬ ಹಿಂದಿನಿಂದ ಬದುಕಿ ಬಾಳಿದವರು. ಅವಸರ

ಅವಸರವಾಗಿ ಕೆಲಸಮಾಡಿ ಕೊನೆಗೆ ಮನಸ್ಸು ಕೆಡಿಸಿಕೊಳ್ಳುವುದು ತರವಲ್ಲ" ಎಂದು ಬಹಿರಂಗವಾಗಿಯೇ ರೈತರಿಗೆ ಬೆದರಿಕೆ ಹಾಕುತ್ತಿದ್ದ. ಆದರೂ ಈಚೆಗೆ ಕೆಲವು ತಿಂಗಳುಗಳಿಂದ, ತನ್ನಲ್ಲಿ ಕೆಲಸಕ್ಕಿದ್ದ ಆಳುಗಳಿಗೆ ಬಳುವಳಿ ಕೊಡಲು ತೊಡಗಿದ್ದ. ಮಂತ್ರವಾದಿಯ ಮಾಯಾಗೃಹದಂತೆ, ಅವನ ಮನೆಯ ತುಂಬ ಅಮೆರಿಕಾ ದೇಶದ ಹಸುರು ರತ್ನಕಂಬಳಿಗಳು ಮತ್ತು ಜಮುಖಾನಗಳು ಶೋಭಿಸುತ್ತಿದ್ದವು.

ಸಿಃವು, ಪೆಂಗ್ಎರುವನ್ನು ಬಯ್ಯುತ್ತಿದ್ದರೂ ಮಿಕ್ಕ ರೈತರು ಮಾತ ನಾಡದೆ ಸುಮ್ಮನಿದ್ದರು. ಜಮೀನ್ದಾರನಿಗೆ "ಕಡಿಮೆ ಕಂದಾಯ ಮತ್ತು ಮುಂಗಡದ ಹಣ ಹಿಂದಿರುಗಿಸುವ" ಚಳವಳಿಯಿಂದ ಸಾಕಷ್ಟು ಪೆಟ್ಟು ಬಿದ್ದು ಹಲ್ಲು ಕಿತ್ತ ಹಾವಿನಂತಾಗಿದ್ದಾನೆಂದೂ, ಹಳೆಯದನ್ನೆಲ್ಲ ಪುನಃ ಕೆದಕಿ ಮನಸ್ತಾಪ ಹೆಚ್ಚಿಸುವುದು ತರವಲ್ಲವೆಂದೂ ಅವರ ಅಭಿಪ್ರಾಯವಾ ಗಿತ್ತು. ಪೆಂಗ್ಎರುವು ಮನೆಯ ತುಂಬ ಆಯುಧಗಳನ್ನು ಗುಪ್ತವಾಗಿ ಜಮಾಯಿಸಿಟ್ಟಿದ್ದಾನೆಂಬುದು ಕೆಲವರಿಗೆ ಗೊತ್ತಿದ್ದರೂ, ಜಮೀನ್ದಾರನ ಗೂಢಚಾರರಿಗೆ ಹೆದರಿ, ಯಾರಿಗೂ ಅದನ್ನು ಬಹಿರಂಗಪಡಿಸಲು ಧೈರ್ಯವೂ ಇರಲಿಲ್ಲ; ಇಚ್ಛೆಯೂ ಇರಲಿಲ್ಲ.

ಇಂತಹ ಅಂಜುಬುರಕ ಅಭಿಪ್ರಾಯಗಳಿಗೆ ಮೊದಲು ಮಾತಿನ ರೂಪ ಕೊಟ್ಟಿದ್ದು, ಹಳ್ಳಿಯಲ್ಲಿ 'ಪಂಡಿತ'ನೆಂದು ಹೆಸರುವಾಸಿಯಾದ ಸಿಯನ್. ಮುಂದೆ ಆಗುವುದನ್ನೆಲ್ಲ ತಿಳಿದ ದೊಡ್ಡ ಭವಿಷ್ಯವಾದಿಯಂತೆ ನಟಿಸುತ್ತಾ "ಹುಯಿಲುಂಗ್ ತಾಲ್ಲೂಕಿನಲ್ಲಿ ಶೀಘ್ರದಲ್ಲೇ ಭೂಸುಧಾರಣೆ ಆಗಲಿದೆ. ಜಮೀನ್ದಾರರೇನೂ ಹಾರಿಹೋಗುವುದಿಲ್ಲ; ಜಮೀನೂ ಓಡಿಹೋಗುವು ದಿಲ್ಲ. ಅವಸರಿಸುವುದು ಏಕೆ? ಎಷ್ಟಾದರೂ ನಾವೆಲ್ಲ ಒಂದೇ ಕೇರಿಗೆ ಸೇರಿದವರಲ್ಲವೆ?" ಎಂದು ಹೇಳುತ್ತಿದ್ದ. ಮೊದಲೇ ಹೆದರುತ್ತಿದ್ದ ಜನ ಈ ಮಾತುಗಳನ್ನು ಕೇಳಿ, ಜಮೀನ್ದಾರರಿಂದ ತಮಗೆ ಬರಬೇಕಾಗಿದ್ದ ಬಾಕಿ ಹಣವನ್ನೂ ಕೇಳಬಾರದೆಂದು ತೀರ್ಮಾನಕ್ಕೆ ಬಂದರು!

ಸಿಃವು ಒಬ್ಬಂಟಿಗನಾಗಿ ಉಳಿದ. ತಾನು ಕೋಪದಿಂದ ಆ ರೀತಿ ಯಲ್ಲಿ ಮಾತನಾಡಬಾರದಾಗಿತ್ತೆಂಬುದನ್ನರಿತ. ಆದ್ದರಿಂದ ತನ್ನ ವಾದ

ವನ್ನು ಮುಂದುವರಿಸಲಿಲ್ಲ. ಜನರಲ್ಲಿ ಜಾಗೃತಿ ಹುಟ್ಟಿಸಿ, ಬಲಿಷ್ಠವಾಗಿ ಸಂಘಟಿಸದ ಹೊರತು ಜಮೀನ್ದಾರರ ಪ್ರಾಬಲ್ಯವನ್ನು ಮುರಿಯುವುದು ಅಸಾಧ್ಯವೆಂದು ಮನಗಂಡು, ತತ್ಕಾಲಕ್ಕೆ ಸುಮ್ಮನಾದ.

* * * *

ಟೆಲಿಫೋನ್ ಕಂಬಗಳನ್ನು ನೆಟ್ಟಂದಿನಿಂದ ಸಿ್ಲು ಹಳ್ಳಿಯ ಪ್ರತಿಯೊಬ್ಬ ರೈತ ಮತ್ತು ಜಮೀನ್ದಾರನ ಮನಸ್ಸಿನಲ್ಲೂ ನಾನಾ ತರದ ಸಂದೇಹ-ಸಮಸ್ಯೆಗಳು ಉದ್ಭವಿಸಿದವು. ಗ್ರಾಮಾಧ್ಯಕ್ಷ ಯು-ಟಾಂಗ್ ನ ಮನೆಗೂ ಟೆಲಿಫೋನ್ ಬಂದ ಮೇಲೆ ಅವರ ಸಂಭ್ರಮ-ಉತ್ಸಾಹ ಇಮ್ಮಡಿಸಿತು.

ಕೆಲಸಗಾರರು ಬಂದುಹೋದ ಮಾರನೆಯ ದಿನವೇ ಗ್ರಾಮಾಧ್ಯಕ್ಷ ಯು-ಟಾಂಗ್, ಹಳ್ಳಿಯ ಮುಖ್ಯಸ್ಥರನ್ನೆಲ್ಲಾ ದೇವಸ್ಥಾನದ ಜಗುಲಿಯ ಮೇಲೆ ಸಭೆ ಸೇರಿಸಿ, ಜಿಲ್ಲಾ ಜನತಾ ಸರ್ಕಾರದಿಂದ ಬಂದಿದ್ದ ತಿಳುವಳಿಕೆಗಳನ್ನು ಪ್ರಸಿದ್ಧಪಡಿಸಿದ. ಭೂಸುಧಾರಣಾ ದಳದವರು ನವಂಬರ್ ೨೫ ರಂದು ಬರುವವರಿದ್ದರು—ಅಂದರೆ, ಇನ್ನೂ ೧೦ ದಿನಗಳ ಅವಕಾಶವಿದ್ದಿತು. ಆ ಅವಧಿಯಲ್ಲಿ, ಜನರಲ್ಲಿದ್ದ ಸಂದೇಹಗಳನ್ನು ಮತ್ತು ತಪ್ಪು ತಿಳುವಳಿಕೆಗಳನ್ನು ನಿವಾರಿಸಬೇಕಾಗಿತ್ತು. ಜಮೀನ್ದಾರರ ಕುಹಕ ಚಟುವಟಿಕೆಗಳ ಬಗ್ಗೆ ಹೆಚ್ಚು ಜಾಗೃತರಾಗಿದ್ದು, ಜನರನ್ನು ಸಂಘಟಿಸಬೇಕಾಗಿತ್ತು. ಶತಮಾನಗಳಿಂದ ತುಳಿಯಲ್ಪಟ್ಟ ರೈತ ಒಮ್ಮೆಯೇ ಮೇಲೇಳಲಾರ. ಆದ್ದರಿಂದ ನಿಧಾನವಾಗಿ, ತಾಳ್ಮೆಯಿಂದ ಅವನಲ್ಲಿ ವರ್ಗ ಜಾಗೃತಿಯುಂಟಾಗುವಂತೆ ಮಾಡಿ, ಜಮೀನ್ದಾರರ ವಿರುದ್ಧ ಹೋರಾಡಲು ಸಿದ್ಧಪಡಿಸಬೇಕಾಗಿತ್ತು. ಒಮ್ಮೆ ವರ್ಗಸಮರದ ಸತ್ವ, ರೈತರಿಗೆ ಅರಿವಾದರೆ ಸಾಕು, ಜಮೀನ್ದಾರರ ದ್ರೋಹಕೃತ್ಯಗಳನ್ನು ಮಣ್ಣುಗೂಡಿಸುವುದು ಅಷ್ಟೇನೂ ಕಷ್ಟವಾಗಿರಲಿಲ್ಲ.

ಭೂಸುಧಾರಣೆಯು **ಜಮೀನ್ದಾರೀ ವರ್ಗವನ್ನು ನಾಶಮಾಡುವುದೇ ವಿನಹ ಜಮೀನ್ದಾರರನ್ನಲ್ಲ** ಎನ್ನುವುದನ್ನು, ಜಮೀನ್ದಾರರೂ ವರ್ತಮಾನ ಪತ್ರಿಕೆಗಳಿಂದಲೂ, ಕೈಪಿಡಿಗಳಿಂದಲೂ ತಿಳಿದುಕೊಂಡಿದ್ದರು.

ತಮ್ಮ ಎಲ್ಲ ಭೂಮಿಯನ್ನೂ ಕಿತ್ತುಕೊಳ್ಳುವುದಿಲ್ಲವೆಂದೂ, ಎಲ್ಲರಂತೆಯೇ ತಮಗೂ ಸಮವಾದ ಭಾಗ ದೊರಕುವುದೆಂದೂ ಅವರಿಗೆ ಗೊತ್ತಿತ್ತು. ಆದರೂ 'ತೋಳ'ನಂತೆ ನುಂಗುತ್ತಿದ್ದ, ಅವರಿಗೆ 'ಕುರಿ'ಗಳೊಡನೆ ಸಮ ಪಾಲು ಸ್ವೀಕರಿಸುವುದು, ಅವರ ಘನತೆಗೆ ಧಕ್ಕೆ ಬಂದಂತಲ್ಲವೇ ?

ಸ್ಸೀ-ವು ಬಾಕಿ ಹಣವನ್ನು ಕೇಳಲು ಬಂದಿದ್ದನೆಂದು ಕೇಳಿದೊಡನೇ ಎರಡನೇ ಹುಲಿ ಪೆಂಗ್-ಎರುವಿನ ರೋಷಕ್ಕೆ ಎಣೆಯಿಲ್ಲದಾಯಿತು. ಮೇಜಿನ ಮೇಲೆ ತನ್ನ ಮುಷ್ಟಿಯನ್ನು ಕುಟ್ಟಿ, ಪಕ್ಕದಲ್ಲಿದ್ದ ತನ್ನ ಉಪ ಪತ್ನಿಗೆ ಹೇಳಿದನು : "ಮೀನು–ಮೊಸಳೆಗಳೆಲ್ಲ ಈಗ ರಾಜರಾಗಿದ್ದಾರೆ. ನಾವು ಇವರ ಕಾಲಿಗೆ ಬೀಳಬೇಕಾಗಿದೆ. ನೋಡಿದೆಯಾ, ಹೇಗಾಯಿತು ಕಾಲ ?"

ಪೆಂಗ್-ಎರುವಿನ ಕೊಠಡಿ ಸುಂದರವಾಗಿ ಅಲಂಕೃತವಾಗಿತ್ತು. ಸುತ್ತಲೂ, ಗೋಡೆಗಳ ಮೇಲೆ ಅಂದವಾದ ಚಿತ್ರಪಟಗಳು ತೂಗು ಹಾಕ ಲ್ಪಟ್ಟಿದ್ದವು. ಆದರೆ ಅವನಿಗೆ ಅತ್ಯಂತ ಪ್ರಿಯವಾದ ಹಳೆಯ ಚಿತ್ರವೊಂದು ಮಾತ್ರ ಈಗ ಅಲ್ಲಿರಲಿಲ್ಲ—ಅದು, ಪೆಂಗ್-ಎರು, ಕೊಮಿಂಟಾಂಗ್ ಸೈನ್ಯ ವನ್ನು ಎದುರುಗೊಳ್ಳುತ್ತಿರುವ ಚಿತ್ರ. ಅಂತಹ ದಿನಗಳು ಕಳೆದು ಹೋದರೂ, ಆ ಚಿತ್ರಗಳನ್ನು ನೋಡುತ್ತಾ ಪೆಂಗ್-ಎರು ಆನಂದ ಪರವಶ ನಾಗುತ್ತಿದ್ದನು.

ಪೆಂಗ್-ಎರು, ಓದುವ ಕೊಠಡಿಯನ್ನು ಬಿಟ್ಟು ನಡುಮನೆಗೆ ಬಂದನು. ಮಧ್ಯದಲ್ಲಿದ್ದ ತನ್ನ ಹಿರಿಯರ ಹೆಸರುಗಳನ್ನು ಕೆತ್ತಿದ್ದ ವಂಶಾ ವಳಿಯ ಕಡೆಗೆ ನೆಟ್ಟ ನೋಟದಿಂದ ನೋಡಿದ. ಅವುಗಳ ಜೊತೆಯಲಿ "ಬೆಳ್ಳಿ ನಕ್ಷತ್ರವೊಂದು ಈ ಮನೆಯನ್ನು ಬೆಳಗುತ್ತಿದೆ" ಎಂದು ಅಕ್ಷರ ಕೆತ್ತಿದ್ದ ಪದಕವೊಂದಿದ್ದಿತು. ತಾನು ಈ ವಿಶೇಷ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂದು ಅವುಗಳನ್ನು ಕೇಳುತ್ತಿದ್ದಾನೇನೋ ಎಂಬಂತೆ ಅವುಗಳತ್ತ ನೋಡುತ್ತಿದ್ದ. ಹಾಗೆಯೇ, ಉರಿಯದೇ ಉಳಿದಿದ್ದ ಗಂಧದ ಕಡ್ಡಿಗಳನ್ನೂ ಸರಿಪಡಿಸಿದ.

'ಪಾಂಗ್........ಪಾಂಗ್....'ಎಂಬ ನಗಾರಿಯ ಏಕಪ್ರಕಾರದ ಧ್ವನಿ ಅಂಗಳದಿಂದಾಚೆಯಿಂದ, ಕೇಳಿಬರುತ್ತಿತ್ತು. ಪೆಂಗ್-ಎರುವಿನ ಪತ್ನಿ ಬೌದ್ಧಸೂತ್ರಗಳನ್ನು ಜಪಿಸುತ್ತಾ, ನಗಾರಿಯನ್ನು ಬಡಿಯುತ್ತಿದ್ದಳು.

"ಊಟ ಸಿದ್ಧವಾಗಿದೆ, ಬುದ್ಧಿ" — ರಕ್ತವಿಲ್ಲದೆ ಬಿಳಿಚಿಕೊಂಡಿದ್ದ ೧೫ ವರ್ಷದ ಹುಡುಗಿಯೊಬ್ಬಳು ಹೊಸಲಿನ ಹೊರಗೆ ನಿಂತು ಹೇಳಿದಳು.

"ಹೊ"ಎಂದು ಬೇಜಾರಿನಿಂದ ಗುಟರಿಸಿ, ಮರುಕ್ಷಣವೇ ತಲೆಯೆತ್ತಿ, "ಯು-ಲಿಯನ್"ಎಂದು ಆಕೆಯ ಹೆಸರನ್ನು ಹಿಡಿದು ಕೂಗಿದ. ಹುಡುಗಿಯು ಹಿಂತಿರುಗಿ ನಿಂತಳು "ನಾನು ನಿನ್ನನ್ನು ಹೇಗೆ ನೋಡಿಕೊಳ್ಳುತ್ತಿದ್ದೇನೆಂದು ನಿನ್ನ ಭಾವನೆ, ಹೇಳು ?"

ಯು-ಲಿಯನ್‌ಳು ಚಕಿತಳಾದಳು. ಮನೆಯ ವಾತಾವರಣ ಬದಲಾಯಿಸಿದ್ದನ್ನು ಅವಳೂ ಅರಿತಿದ್ದಳು. ಹಿಂದೆ ಒಂದು ದಿನ ಶ್ರೀಮತಿ ಪೆಂಗ್‌ಗಾಗಿ ಸಾಮಾನು ತರಲು ಪೇಟೆಗೆ ಹೋಗಿದ್ದಾಗ ಜನರು ಗುಂಪುಗುಂಪಾಗಿ ಬೀದಿಗಳಲ್ಲಿ ನಿಂತು ಸಂತೋಷದಿಂದ ಮಾತನಾಡುತ್ತಿದ್ದುದನ್ನು ನೋಡಿದ್ದಳು. ಗೋಡೆಗಳ ತುಂಬ ಚಿತ್ರ ಒತ್ತಿದ ಭಿತ್ತಿಪತ್ರಗಳನ್ನು ಅಂಟಿಸಿ, ದೊಡ್ಡ ಅಕ್ಷರಗಳಲ್ಲಿ ಘೋಷಣೆಗಳನ್ನು ಬರೆದಿದ್ದರು. ಒಂದು ಚಿತ್ರದಲ್ಲಿ ಒಬ್ಬ ಹಂದಿಯಂತಹ ಜಮಿನ್ದಾರನು ಹೊಟ್ಟೆಗಿಲ್ಲದೆ ಬಡಕಲಾಗಿದ್ದ ರೈತನ ಬೆನ್ನಿನ ಮೇಲೆ ಚಕಾಲ ಕುಳಿತು ಸವಾರಿ ಮಾಡುತ್ತಿದ್ದುದನ್ನು ತೋರಿಸಲಾಗಿತ್ತು. ಯು-ಲಿಯನ್‌ಳು ಶ್ರೀಮತಿ ಪೆಂಗ್‌ಳಿಗೆ ೮ ವರ್ಷಗಳ ಸೇವೆ ಸಲ್ಲಿಸಿದ್ದಳು. ಒಂದು ಸೂಜಿ ಕದ್ದಿರಲಿಲ್ಲ. ಒಂದಿಷ್ಟು ದಾರ ಮುಟ್ಟಿರಲಿಲ್ಲ. ಆದರೂ ಆಗಾಗ್ಗೆ ಪೆಂಗ್-ಎರುವಿನ ಚಿಕ್ಕರಾಣಿ ಮತ್ತು ಶ್ರೀಮತಿ ಪೆಂಗ್, ಇಬ್ಬರಿಂದಲೂ ಹೊಡೆತ ತಿನ್ನಬೇಕಾಗಿತ್ತು. ಒಂದು ಸಲ, ಕಳೆದ ಡಿಸೆಂಬರಿನಲ್ಲಿ ಚಿಕ್ಕ ಯಜಮಾನಿಯ ಮಗು ಹಾಸಿಗೆಯಿಂದ ಕೆಳಗೆ ಉರುಳಿದ್ದಕ್ಕೆ, ಯು-ಲಿಯನ್‌ಳು ಬೆತ್ತಲೆ ನಿಂತು ಛಡಿ ಏಟು ತಿನ್ನಬೇಕಾಯಿತು. ಈ ಇಬ್ಬರು ಹೆಂಗಸರಿಗೆ ಹೋಲಿಸಿ ನೋಡಿದರೆ, ಪೆಂಗ್ ಬುದ್ಧಿಯವರೇ ಹೆಚ್ಚು ಕರುಣಾಮಯರೆಂದು ಹೇಳಬಹುದಾಗಿತ್ತು. ಅವರು ಕೊಡುತ್ತಿದ್ದುದು ಹೆಚ್ಚೆಂದರೆ ಒಂದೆರಡು ಒದೆಗಳು ಮಾತ್ರ. ಆದುದರಿಂದ, "ನೀವು ನನ್ನನ್ನು

ಸರಿಯಾಗಿ ನೋಡಿಕೊಳ್ಳುತ್ತಿದ್ದೀರಿ ಬುದ್ಧಿ"ಎಂದು ಉತ್ತರ ಕೊಟ್ಟಳು. ಹಾಗೆಯೇ, ಅಡಿಗೆ ಮನೆಯ ಹೊಗೆಯಿಂದಾಗಿ ರಕ್ತದಂತೆ ಕೆಂಪಾಗಿದ್ದ ಕಣ್ಣುಗಳಿಂದ ತನ್ನ ಯಜಮಾನನತ್ತ ನೋಡಿದಳು. ತಾನು ಹೇಳಿದ ಮಾತುಗಳು ಸಲ್ಲುತ್ತವೆಯೇ ? ಎನ್ನಿಸಿತು. ಆದರೆ ಹಾಗೆ ಹೇಳದಿದ್ದರೆ ವಿಧಿಯಿಲ್ಲ.

ಅಂದಿನ ದಿನ ಪೆಂಗ್ ದಂಪತಿಗಳು ಕೂಡಿ ಉಣಲಿಲ್ಲ. ಪೆಂಗ್ ತನ್ನ ಕೊಠಡಿಯಲ್ಲೇ, ಚಿಕ್ಕರಾಣಿ ಮತ್ತು ಮಗುವಿನೊಂದಿಗೆ ಊಟದ ಶಾಸ್ತ್ರ ಮುಗಿಸಿದ. ಅನಂತರ ಎಂದಿನಂತೆ ಮಲಗಿ ವಿಶ್ರಮಿಸಲಿಲ್ಲ. ಇಬ್ಬರೂ ಸೇರಿ ಒಳಗಿನಿಂದ ಚಿಲಕಹಾಕಿಕೊಂಡು, ಸದ್ದಾಗದಂತೆ ತಮ್ಮ ಸಾಮಾನುಗಳನ್ನೆಲ್ಲಾ ಗಂಟುಕಟ್ಟಿದರು.

ಇದು ಸಾಯಂಕಾಲದ ತನಕ ಸಾಗಿತು : ಆಮೇಲೆ ಪೆಂಗ್ ಕೋಣೆಯಿಂದ ಹೊರಬಿದ್ದು, ತನ್ನ ಅಣ್ಣನ ಮನೆಯ ಕಡೆ ಹೊರಟ. ದಾರಿಯಲ್ಲಿ ಅವನ ಮನೆಗೆಲಸದವನಾದ ಫು-ಚುವಾನನನ್ನು ಸಂಧಿಸಿದ.

* * * *

ಫು-ಚುವಾನನು ಆ ಮಧ್ಯಾಹ್ನವೆಲ್ಲವೂ ಭತ್ತ ಕುಟ್ಟುತ್ತಿದ್ದ. ಕೆಲಸ ಮಾಡುತ್ತಿರುವಂತೆ, ಅವನ ಮನಸ್ಸಿನಲ್ಲಿ ಅನೇಕ ವಿಚಾರ ತರಂಗಗಳು ಏಳುತ್ತಿದ್ದವು : ಒಡೆಯನು ತನ್ನ ಶತ್ರುವೋ ಅಥವಾ ಹಿತಚಿಂತಕನೋ ? ಶಿವುವೇನೋ ತನ್ನ ಒಡೆಯನ ವಿಷಯವಾಗಿ ಬೇಕಾದಷ್ಟು ಕೆಟ್ಟದ್ದನ್ನೆಲ್ಲಾ ಹೇಳಿದ್ದನು. ಆದರೆ ತನ್ನ ಧಣಿ, ಬೇರೆ ನಾಲ್ಕು ಕೆಲಸಗಾರರನ್ನು ವಜಾ ಮಾಡಿ ತನ್ನನ್ನು ಮಾತ್ರ ಉಳಿಸಿಕೊಂಡು ಚೆನ್ನಾಗಿ ನೋಡಿಕೊಳ್ಳುತ್ತಿರಲಿಲ್ಲವೇ ? ಪೆಂಗ್ ಪ್ರಭುಗಳು ಹಾಳಾದರೆ ತನಗೆ ಇನ್ನೆಲ್ಲಿ ಕೆಲಸ ಸಿಕ್ಕುತ್ತದೆ? ಯಾರು ಅನ್ನ ಹಾಕುವರು ? ಪೆಂಗ್ ಬುದ್ಧಿಯವರು ಈ ವಿಷಯವನ್ನು ಅನೇಕ ಸಲ ಮನದಟ್ಟಾಗುವಂತೆ ತಿಳಿಸಿದ್ದರು : "ಭೂ ಸುಧಾರಣೆ ! ಭೂ ಸುಧಾರಣೆ ಎಂದರೆ ಕಮ್ಯುನಿಸಂ ಅಂತ. ಈ ವರ್ಷ ಜಮಿನ್ದಾರರು, ಮುಂದಿನವರ್ಷ ಶ್ರೀಮಂತ ರೈತರು, ಅದರ ಮುಂದಿನವರ್ಷ ಮಧ್ಯಮವರ್ಗ

ರೈತರು—ಹೀಗೇ ಇನ್ನೈದು ವರ್ಷಗಳಲ್ಲಿ ಎಲ್ಲರೂ ನಿರ್ಗತಿಕರಾಗುತ್ತಾರೆ. ಅದೇ ಭೂಸುಧಾರಣೆಯಿಂದ ದೊರಕುವ ಫಲ."ವಾಸ್ತವವಾಗಿ, ಫು-ಚುವಾನನಿಗೆ, ಭೂಸುಧಾರಣೆಯಾಗದಿದ್ದರೆ ಅಂತಹ ಕೆಡಕೇನೂ ಆಗುವುದಿಲ್ಲವೆಂದೇ ಅನಿಸುತ್ತಿತ್ತು. ಏಕೆಂದರೆ ಮೊದಲು ಅವನಲ್ಲಿದ್ದುದು ಒಂದು ಹರಕು ಕಂಬಳಿ ಮಾತ್ರ. ಆದರೆ ಈಗ! ಕಳೆದ ತಿಂಗಳು ಯಜಮಾನನೇ ಅವನಿಗೆ ಒಂದು ಹೊಲವನ್ನು ಬಳುವಳಿಯಾಗಿ ಕೊಟ್ಟನಲ್ಲವೇ? ಅಷ್ಟೇ ಅಲ್ಲ. "ನೋಡು, ನಾವೆಲ್ಲ ಪೆಂಗ್ ಮನೆತನಕ್ಕೆ ಸೇರಿದವರು. ಯಾರಿಗೆ ಶಕ್ಯವೋ, ಅವರು ಇಲ್ಲದ ಬೇರೆಯವರಿಗೆ ಸಹಾಯ ಮಾಡುವ ಅವಕಾಶವಿರಬೇಕು. ಏನಿದ್ದರೂ ಎಲ್ಲ ನಮ್ಮ-ನಮ್ಮಲ್ಲೆ ಹೊರತು, ಹೊರಗಿನವರಾರೂ ನಮ್ಮ ಲಾಭದಲ್ಲಿ ಪಾಲುದಾರರಲ್ಲ."ಎಂದು ಪೆಂಗ್ ದೊರೆ ಮನೆತನದ ವಂಶಾವಳಿಯ ಕಡೆಗೆ ತೋರಿಸಿ, ಹೇಳಿರಲಿಲ್ಲವೇ?

ಫು-ಚುವಾನನು ಭತ್ತ ಕುಟ್ಟುತ್ತಿದ್ದುದನ್ನು ನೋಡಿ ಪೆಂಗ್-ಎರುವಿಗೆ ಮನ ಕರಗಿತು. "ಅಯ್ಯೋ, ನಿಲ್ಲಿಸು. ಈ ಅಕ್ಕಿಯ ಅನ್ನ ಯಾರು ಉಣ್ಣುವರೋ ಏನೋ! ನಾವೇಕೆ ಇಷ್ಟು ಶ್ರಮ ಪಡಬೇಕು."ಎಂದನು ಟೆಲಿಫೋನ್ ಕಂಬಗಳು ಬಂದಾಗಿನಿಂದ, ಪೆಂಗ್-ಎರು ಇದೇ ಧಾಟಿಯಲ್ಲಿ ಯೋಚಿಸುತ್ತಿದ್ದ. ಒಮ್ಮೆ, 'ಹಸುಗಳಿಗೆಲ್ಲ ಹುಲ್ಲೇ ಸಾಕು. ಕಾಳುಗಳನ್ನೇಕೆ ಹಾಕಬೇಕು'ಎಂದೂ ಹೇಳಿದ್ದ.

ಕೈಗಳನ್ನು ಬೆನ್ನಿನ ಹಿಂಭಾಗದಲ್ಲಿ ಕಟ್ಟಿಕೊಂಡು, ಯೋಚನಾ ಮಗ್ನನಾಗಿ ಪೆಂಗ್-ಟಿಂಗನ ಮನೆಯ ಕಡೆ ಹೋದನು.

* * * *

ಗ್ರಾಮಾಧ್ಯಕ್ಷ ಮತ್ತು ಹಳ್ಳಿಯ ನಾಯಕರು, ಭೂಸುಧಾರಣೆಯ ಬಗ್ಗೆ ಅಪಪ್ರಚಾರ ಹಬ್ಬದಂತೆ ಎಷ್ಟು ಪ್ರಯತ್ನಪಟ್ಟರೂ ಫಲಕಾರಿಯಾಗಲಿಲ್ಲ. ಪೇಟೆ ಬೀದಿಯಲ್ಲಿದ್ದ ಉಗ್ರಾಣದ ಮಾಲಿಕರು, ಇನ್ನು ಮುಂದೆ ನಾವು ದವಸಧಾನ್ಯಗಳನ್ನು ಕೊಳ್ಳುವುದಿಲ್ಲ. ಜಮೀನಿನ ಪುನರ್ವ್ಯವಸ್ಥೆಯಲ್ಲಿ ಯಾರು ಏನಾಗುತ್ತಾರೋ?' ಎಂದು ಹೇಳಿ ರೈತರನ್ನು ಹೆದರಿಸು

ತ್ತಿದ್ದರು. ಕಾಳು ಕಡ್ಡಿ ಮತ್ತು ಇತರೆ ಚಿಲ್ಲರೆ ಸಾಮಾನು ಕೊಳ್ಳುವವರೂ ಇದೇ ರೀತಿ ಹೇಳುತ್ತಿದ್ದರು. ಈ ವಿಧವಾದ ಸಂದೇಹ-ಸಂಶಯಗಳು ಎಲ್ಲಿಂದ ಹುಟ್ಟುತ್ತವೆಂಬುದು ಯಾರಿಗೂ ತಿಳಿಯಲಿಲ್ಲ. ಹಳ್ಳಿಯಲ್ಲಿ ಹುಟ್ಟಿ ಪೇಟೆಗೆ ಹರಡಿತೋ ಅಥವಾ ಪೇಟೆಯಿಂದ ಹಳ್ಳಿಗೆ ಬಂತೋ, ಯಾರು ಬಲ್ಲರು !

ರೈತರು ತರಕಾರಿ, ಮೊಟ್ಟೆ ಮೊದಲಾದುವುಗಳನ್ನು ಹೊತ್ತು ಪಟ್ಟಣಕ್ಕೆ ಹೊದರೆ, ಅಲ್ಲಿ ವರ್ತಕರ ಸಂಶಯಾತ್ಮಕ ಪ್ರಶ್ನೆಗಳು ಇವರ ನಂಬಿಕೆಯ ಕಟ್ಟುಗಳನ್ನೆಲ್ಲಾ ಬಿಚ್ಚುತ್ತಿದ್ದವು. ಸುದ್ದಿಗಳ ಸರಕುಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ವಾಪಸು ಬರುತ್ತಿದ್ದರು. ಬಂದಮೇಲೆ ಗ್ರಾಮಾಧ್ಯಕ್ಷನ ಮೇಲೆ ಅದೇ ಪ್ರಶ್ನೆಗಳ ಸುರಿಮಳೆ ಕರೆಯುತ್ತಿದ್ದರು. "ಮದುವೆಯಾದವನಿಗೆ ಭೂಮಿ ಸಿಕ್ಕುವುದಿಲ್ಲವಂತೆ, ನಿಜವೇ? ಅಥವ ಜಮೀನು ಸಿಗಬೇಕಾದರೆ ಮದುವೆ ಆಗಿರಲೇ ಬೇಕೆ?—ಹೀಗೇ ಇನ್ನೂ ಏನೇನೊ ತರಹೆವಾರಿ ಪ್ರಶ್ನೆ ರೈತರ ಮನದಲ್ಲಿ ಉದ್ಭವಿಸಿ, ಕೇವಲ ಒಂದೆರಡು ಎಕರೆಗಳು ಜಮೀನುಳ್ಳ ಪುಟ್ಟ ರೈತರು ಹೆದರತೊಡಗಿದರು.

ಯೂ-ಚೇನ್ ಎಂಬ ಹೆಂಗಸು ತನ್ನ ಯಜಮಾನರು ಪ್ರಯಾಣ ಹೋಗಿದ್ದುದರಿಂದ ಸಿಯುನ್ ಎಂಬ ಶ್ರೀಮಂತ ರೈತನ ಮನೆಯಲ್ಲಿ ಮೂರು ತಿಂಗಳಿಂದ ಹಾಲು ಕೊಡುವ ದಾದಿಯಾಗಿ ಕೆಲಸ ಮಾಡುತ್ತಿದ್ದಳು. ಒಂದು ದಿನ ಇದ್ದಕ್ಕಿದ್ದಂತೆ ಅವಳ ಅತ್ತೆ ಬಂದು ತನ್ನ ಹಳ್ಳಿಗೆ ಹಿಂದಿರುಗಿ ಬರ ಬೇಕೆಂದು ಹಟ ಹಿಡಿದು ಕುಳಿತಳು. ಭೂ ಸುಧಾರಣೆಯಾದಮೇಲೆ ಒಳ್ಳೆಯ ಮೈಕಟ್ಟು ಇರುವ ಹೆಂಗಸರನ್ನೆಲ್ಲ ಮಂಚೂರಿಯೊಕ್ಕೆ ಕಳಿಸುತ್ತಾರೆಂದು ಯಾರೋ ಆಕೆಗೆ ಹೇಳಿದರಂತೆ, ಅದಕ್ಕಾಗಿ ಗಾಬರಿಯಿಂದ ಸೊಸೆಯನ್ನು ತಕ್ಷಣವೇ ವಾಪಸು ಕರೆದುಕೊಂಡು ಹೋಗಲು ಆಕೆ ಹೊರಟು ಬಂದಿದ್ದಳು.

ಈ ಗೊಂದಲದ ಪರಿಸ್ಥಿತಿಯಿದ್ದಾಗ, ಒಂದು ದಿನ ಸಿ-ವುವಿನ ಮನೆಯ ಮುಂದೆ ಯಾರೋ ಎಸೆದಿದ್ದ ಒಂದು ಪೊಟ್ಟಣ ಸಿಕ್ಕಿತು. ಒಡೆದು ನೋಡಿದಾಗ ಹತ್ತಿಯ ಚೆಂಡಿನೊಳಗೆ ಒಂದು ಕಾಗದ ಇದ್ದಿತು. ಅದರಲ್ಲಿ

"ಒಬ್ಬ ಪೆಂಗ್ ಇನ್ನೊಬ್ಬ ಪೆಂಗ್‌ನ ತಲೆ ಕತ್ತರಿಸಲು ಇಚ್ಛಿಸುವುದಿಲ್ಲ. ಆದರೂ ನೀನು ಹೆಚ್ಚಾಗಿ ಬಾಲ ಬೆಳೆಸಿದರೆ, ಮಚ್ಚಿನ ರುಚಿ ನೋಡಬೇಕಾಗುವುದು.'' ಎಂಬ ಎಚ್ಚರಿಕೆಯ ಮಾತು ಬರೆದಿದ್ದವು.

ಸುಳ್ಳು ಸುದ್ದಿಗಳು ಸೊಳ್ಳೆಗಳಂತೆ ಎಲ್ಲೆಲ್ಲೂ ಝೇಂಕರಿಸಿದವು. ಸ್ವಯಂ ಸೇವಕರು ಅವುಗಳ ಉಗಮ ಸ್ಥಾನವನ್ನು ಪತ್ತೆಹಚ್ಚಲು ಪ್ರಯತ್ನಿಸಿದರು. ರೈತರೂ ತುಂಬಾ ಜಾಗರೂಕತೆಯಿಂದ ಮಾತನಾಡುತ್ತಾ, ಸ್ವಯಂ ಸೇವಕರು ಕೇಳಿದ ಪ್ರಶ್ನೆಗಳಿಗೆ 'ನಮಗೆ ಗೊತ್ತಿಲ್ಲ' ಎಂದೋ'ಮರೆತೆಹೋಗಿದೆ'ಎಂದೋ ಹೇಳುತ್ತಿದ್ದರು. ಕೊನೆಗೆ ಗ್ರಾಮಾಧ್ಯಕ್ಷನು ರೈತರ ಸಭೆ ಸೇರಿಸಿ ಕೂಲಂಕಷವಾಗಿ ವಿಚಾರಿಸಿದ ಮೇಲೆ, ಜಮೀನ್ದಾರ ಲೋ-ಪೈ-ಜಂಗ್ ಮತ್ತು ಪೆಂಗ್ ಸಹೋದರರ ಮನೆಗಳೆ ಈಸುಳ್ಳು ಸುದ್ದಿಗಳ ಜನ್ಮಸ್ಥಾನಗಳೆಂದು ತಿಳಿಯಿತು. ಗುಮಾನಿಗೆ ಸರಿಯಾಗಿ ಪ್ರತ್ಯಕ್ಷ ಸಾಕ್ಷ್ಯಗಳು ದೊರೆತವು. ಲೊ-ಪೈ-ಜಂಗ್‌ನು, 'ದೇವಿ ಹಾಕುವ ರಸದಲ್ಲಿ ಸರ್ಕಾರದವರು ವಿಷ ಬೆರೆಸಿದ್ದಾರ' ಎಂದು ಹೇಳುತಿದ್ದ. ಪೆಂಗ್ ಎರಡನೆ ಹುಲಿ, "ಸಾಗುವಳಿ ಮಾಡುವವನೇ ಫಸಲು ಪಡೆಯುವವ" ಎಂದು ಬರೆದಿದ್ದ ಭಿತ್ತಿ ಪತ್ರಗಳನ್ನು ಭಹಿರಂಗವಾಗಿಯೇ ಕಿತ್ತು ಹರಿದಿದ್ದನು. ಹೀಗೆಯೇ ಪೆಂಗ್-ಟೆಂಗ್‌ನೂ ಜನರಲ್ಲಿ ಅಧೈರ್ಯ ಹುಟ್ಟುವಂತೆ ನಾನಾವಿಧವಾದ ಸುಳ್ಳು ಸದ್ದಿಗಳನ್ನು ಹರಡುತ್ತಿದ್ದ.

ನವೆಂಬರ್ ಇಪ್ಪತ್ತಮೂರನೆ ದಿನದ ಬೆಳಿಗ್ಗೆ ಗ್ರಾಮಾಧ್ಯಕ್ಷ ಮತ್ತು ಇತರ ನಾಯಕರು ಸಭೆ ಸೇರಿ, ಆ ಮೂವರು ಜಮೀನ್ದಾರರನ್ನೂ ವಿಚಾರಣೆಗೆ ಗುರಿ ಪಡಿಸಬೇಕೆ, ಎಂಬುದನ್ನು ಚರ್ಚಿಸುತ್ತಿದ್ದಾಗ ಪೆಂಗ್-ಎರಡನೇ ಹುಲಿಯ ಪತ್ನಿ ರಭಸದಿಂದ ಕೊಠಡಿಯೊಳಕ್ಕೆ ಓಡಿಬಂದು ಎದೆ ಬಡಿದುಕೊಳ್ಳುತ್ತಾ ಗೋಳೋ ಎಂದು ಅಳತೊಡಗಿದಳು.

"ಅಯ್ಯೋ ನೀಚ ಪಾಪಿ" ಎಂದು ತನ್ನ ಗಂಡನನ್ನು ಶಪಿಸುತ್ತಿದ್ದಳು. "ಆ ಸೂಳೆ, ಎಂದು ನನ್ನ ಮನೆಗೆ ಕಾಲಿಟ್ಟಳೋ ಅಂದಿನಿಂದ ನಾವು ಒಬ್ಬರ ಮುಖ ಒಬ್ಬರು ನೋಡದಹಾಗೆ ಮಾಡಿದಳು. ನಿನ್ನೆ ರಾತ್ರಿಯೆಲ್ಲಾ ಅವನ ಕೊಠಡಿಯಲ್ಲಿ ದೀಪ ಉರಿಯುತ್ತಿತ್ತು. ಅವರೇನು ಮಾಡಿದರು ಎಂಬುದು ಈ ಬೆಳಿಗ್ಗೆ ಯುಲಿಯರ್ಙಳು ಕಸಗುಡಿಸಲು ಹೋದಾಗ ತಿಳಿಯಿತು. ಅವನು

ನನ್ನ ಒಡವೆ ದುಡ್ಡು ಇಟ್ಟಿದ್ದ ಪೆಟ್ಟಿಗೆಯನ್ನೂ ಹೊತ್ತುಕೊಂಡು ಆ ಮಿಟಗಲಿಯಜೊತೆ ಹೆನೆಓಡೋಗಿದ್ದಾ".



ಜನತಾಸೈನಿಕರು ಇಬ್ಬರು ದ್ರೋಹಿ ಜಮೀನ್ದಾರರನ್ನೂ ಸೆರಹಿಡಿದು ತಂದರು.

ಎಲ್ಲರೂ ಒಮ್ಮೆಲೇ ಚಿಮ್ಮಿ ನಿಂತರು. ಹಿಂವು ಕಟಕಟನೆ ಹಲ್ಲು ಕಡಿಯುತ್ತಾ, ಅವರನ್ನು ಆಕೂಡಲೆ ಹಿಂಬಾಲಿಸಬೇಕೆಂದನು.

ಗ್ರಾಮಾಧ್ಯಕ್ಷನು ಹ್ಸಿಯಾಂಗ್ ಜಿಲ್ಲಾ ಸರ್ಕಾರದ ಅಧ್ಯಕ್ಷನಿಗೆ ಅವಸರವಾಗಿ ಫೋನಿನಲ್ಲಿ ಈ ವಿಷಯವನ್ನು ತಿಳಿಸಿದನು. ಮತ್ತು ಶ್ರೀಮತಿ ಪೆಂಗ್ ಳೊಡನೆ ಕೆಲವು ಕಾರ್ಯಕರ್ತರನ್ನು ಮನೆಯ ಶೋಧನೆಗಾಗಿ ಕಳುಹಿಸಿದನು.

ಮಧ್ಯಾಹ್ನದ ಹೊತ್ತಿಗೆ ಜಿಲ್ಲಾ ಸರ್ಕಾರದಿಂದ ಫೋನಿನಲ್ಲಿ ಲೊ-ಪೈ-ಜಂಗ್ ಮತ್ತು ಪೆಂಗ್-ಟಂಗ್‌ರನ್ನು 'ಅಪ ಪ್ರಚಾರಕರು' ಎಂಬ ಅಪಾದನೆಯ ಮೇಲೆ ದಸ್ತಗಿರಿ ಮಾಡಬೇಕೆಂದು ಕರೆ ಬಂದಿತು. ಅವರನ್ನು ಕೂಡಲೇ ಜನತಾಸೈನಿಕರು ಸೆರೆಹಿಡಿದು ಜಿಲ್ಲಾ ಕೇಂದ್ರಕ್ಕೆ ಕರೆದುಕೊಂಡು ಹೋದರು. ದಾರಿ ಟೆಲಿಫೋನ್ ಕಂಬಗಳ ಬದಿಯಲ್ಲೇ ಮುಂದುವರೆಯಿತು. ಮಳೆ ಗಾಳಿಯ ಬಡಿತದಿಂದ ತಂತಿಗಳು ಮೃದುವಾಗಿ ಧ್ವನಿ ಗೈಯ್ಯುತ್ತಿದ್ದವು. ಅದು ರೈತರ ಶತಮಾನಗಳ ಕಷ್ಟವನ್ನು ನೋಡಿ ನರಳುವಂತೆ ತೊರುತ್ತಿತ್ತು. ಆದರೆ ಆಧ್ವನಿಯಲ್ಲೇ ಹುಯಿಲುಂಗ್ ತಾಲ್ಲೂಕಿನ ರೈತರ ಭವ್ಯ ಸ್ವರ್ಗ ಜೀವನದ ಭವಿಷ್ಯತ್ತಿನ ಮಾರ್ದನಿಯೂ ಅಡಗಿತ್ತು.

ಎರಡೇ ದಿನಗಳು! ಅಷ್ಟರಲ್ಲಿ ಭೂ ಸುಧಾರಣೆಯ ದಳ ಬರುವುದರಲ್ಲಿತ್ತು.

# ಕೆಲಸಕ್ಕಾಗಿ ಕಂಕಣ ತೊಟ್ಟರು.

ಪೆಂಗ್ ಮನೆತನದ ಪಿತೃ ದೇವಸ್ಥಾನವನ್ನು ಕಟ್ಟಿ ಕೇವಲ ೯೦ವರ್ಷ ಗಳಾಗಿದ್ದರೂ, ಅದರ ಮುಂದೆ ಅರ್ಧಚಂದ್ರಾಕೃತಿಯಲ್ಲಿ ಬೆಳೆದಿದ್ದ ದೇವ ಗಣಿಗೆಲೆ ಮರಗಳು ಐನೂರು ವರ್ಷಗಳ ಜೀವನ ಚರಿತ್ರೆಯನ್ನು ಹೇಳು ವಂತಿದ್ದುವೆಂದು ಎಲ್ಲರ ನಂಬಿಕೆಯಾಗಿತ್ತು. ಆದರೆ ಆ ದೇವಸ್ಥಾನವಾ ಗಲೀ, ಈ ಮರಗಳಾಗಲೀ, ೧೯೫೦ನೇ ನವೆಂಬರ್ ೨೬ರಲ್ಲಿ ನಡೆದ ಘಟನೆ ಗಿಂತ ಪರಿಣಾಮಕಾರಿಯಾದ ಘಟನೆಯನ್ನು ನೋಡಿರಲಿಲ್ಲ.

ಸಾಮಂತಶಾಹಿ ಆರ್ಥಿಕ ಪದ್ಧತಿಯ ದುರ್ಗದೊಳಗೆ ತನ್ನ ತವರನ್ನು ಭದ್ರವಾಗಿ ಸ್ಥಾಪಿಸಿಕೊಂಡಿದ್ದ ಪುರಾತನ ಮೂಢನಂಬಿಕೆ-ಸಂಪ್ರದಾಯ ಗಳನ್ನು ಪುಡಿಮಾಡುವಂತಹ ಘಟನೆ ಅಂದು ಜರುಗಿತು. ಹುಯಿಲುಂಗ್ ತಾಲ್ಲೂಕಿನ ಭೂಸುಧಾರಣೆಗಾಗಿ ಮೊಟ್ಟಮೊದಲಿನ ಸಭೆ ಅಂದು ಸೇರಿತ್ತು. ನೂರಾರು ಮಂದಿ ರೈತರು ದೇವಸ್ಥಾನದ ಮುಂದಿದ್ದ ವಿಶಾಲವಾದ ಕಲ್ಲು ಮೆಟ್ಟಲುಗಳ ಮೇಲೆ ನೆರೆದಿದ್ದರು.

ತಾಲ್ಲೂಕು ಸರ್ಕಾರದ ಅಪ್ಪಣೆಯ ಮೇರೆಗೆ ಹಿಂದಿನ ದಿನವೇ ದೇವ ಸ್ಥಾನದ ಮುಂಭಾಗದಲ್ಲಿ ಒಂದು ಎತ್ತರವಾದ ವೇದಿಕೆಯನ್ನು ನಿರ್ಮಿಸಿ ದ್ದರು. ಇಬ್ಬದಿಯಲ್ಲೂ ಎರಡು ದೊಡ್ಡ ರಾಷ್ಟ್ರೀಯ ಧ್ವಜಗಳು ಹಾರಾ ಡುತ್ತಿದ್ದವು. ವೇದಿಕೆಯ ಹಿಂಭಾಗದಲ್ಲಿ, ಹಿಂದೆ ಜಮೀನ್ದಾರರು ಸೆರೆ ಹಿಡಿದ ರೈತಕೈದಿಗಳು ತಪ್ಪಿಸಿಕೊಂಡು ಹೋಗದಂತೆ ತಡೆಯಲು ಉಪ ಯೋಗಿಸುತ್ತಿದ್ದ ಭರ್ಜಿ ಮೊನೆಯ ಕಬ್ಬಿಣದ ಸಲಾಕೆಯ ಸಾಲು ಕಾಣುತ್ತಿ ದ್ದಿತು. ಜಮೀನ್ದಾರರ ಕ್ರೌರ್ಯದ ಪ್ರತೀಕದಂತಿದ್ದ ಇದರ ಹಿನ್ನೆಲೆ ಅಂದಿನ ಸ್ವಾತಂತ್ರ್ಯಸಮಾರಂಭಕ್ಕೆ ವಿಶೇಷ ಕಳೆಕೊಟ್ಟಿತ್ತು.

ಬಾವುಟಗಳ ನಡುವೆ, ರಾಷ್ಟ್ರಾಧ್ಯಕ್ಷ ಮಾವೋ-ಟ್ಸೆ-ಟುಂಗ್‌ರ ಚಿತ್ರಪಟವೊಂದನ್ನು ಇಡಲಾಗಿತ್ತು. ಅವರ ಗಂಭೀರ ಯೋಚನಾಮಗ್ನ ಕರುಣಾಮಯ ಮುಖ, ಮುಂದೆ ನೆರೆದಿದ್ದ ರೈತರನ್ನು ವೀಕ್ಷಿಸುತ್ತಾ ಮುಗು ಳ್ನಗೆ ಸೂಸುವಂತೆ ಕಂಡುಬರುತ್ತಿತ್ತು. ಹಿಂದೆ, "ಮಹೋತ್ಸವದ ಬಾಗಿಲು"

“ಧರ್ಮದ ದಾರಿ” ಎಂಬ ತಲೆಬರಹಗಳಿದ್ದ ಕೆತ್ತನೆಯ ಗೋಡೆಗಳ ಮೇಲೆ ಈಗ ರೈತಸಂಘದ ಮುಖಂಡರುಗಳ, ಗೃಹಕೈಗಾರಿಕೆ ಕೆಲಸಗಾರರ ಸಂಘದ ಮತ್ತು ವಾಣಿಜ್ಯಭವನದ ಪ್ರತಿನಿಧಿಗಳ ಸ್ಥಾನಗಳನ್ನು ಸೂಚಿಸುವ ಬರಹ ಗಳಿದ್ದವು.

ಸಭೆ ೧೦ ಗಂಟೆಗೆ ಪ್ರಾರಂಭವಾಗಲಿತ್ತು. ಬೆಳಿಗ್ಗೆ ೬ ಘಂಟೆಗೇ ಹುಯಿಲುಂಗ್ ತಾಲ್ಲೂಕಿನ ಒಂಬತ್ತು ಹಳ್ಳಿಗಳಿಂದಲೂ ಮನೆಗೊಬ್ಬರಂತೆ ಪ್ರತಿನಿಧಿಗಳು ತಾಲ್ಲೂಕು ಕೇಂದ್ರವಾದ ಸಿ್ಲಲು ಹಳ್ಳಿಗೆ ಹೊರಟರು. ಕೆಲವರು “ ಭೂಸುಧಾರಣಾದಳದ ಬಂಧುಗಳಿಗೆ ಸುಸ್ವಾಗತ” ಎಂದು ಬರೆದ ಕಾಗದದ ಬಾವುಟಗಳನ್ನು ಹಿಡಿದಿದ್ದರು. ಸಪ್ತಋಷಿಮಂಡಲದ ಪೇಟೆ ಬೀದಿಯ ಪ್ರತಿನಿಧಿಗಳೂ ಬಂದರು. ಹಲವರು ತಮ್ಮ ತಲೆಗಳಲ್ಲಿ ನಾನಾ ತರಹ ಸಂಶಯ-ಸಮಸ್ಯೆಗಳನ್ನು ತುಂಬಿಕೊಂಡು ಬಂದಿದ್ದರು. ಅವರು ಒಬ್ಬರಿಗೊಬ್ಬರು ಗುಜುಗುಜನೆ ಮೆಲುದನಿಯಲ್ಲಿ ಮಾತಾಡಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಮೌನವಾಗಿದ್ದರು.

ಗ್ರಾಮಕೈಗಾರಿಕೋದ್ಯಮಿಗಳು ಮತ್ತು ಬೀದಿವ್ಯಾಪಾರಿಗಳು ತಮಟೆ ಗಳನ್ನು ಬಡಿದುಕೊಂಡು ಜೈಕಾರ ಮಾಡುತ್ತಾ ಬಂದಾಗ, ಸಭೆಯಲ್ಲಿ ಸ್ವಲ್ಪ ಲವಲವಕೆ ಕಂಡುಬಂತು. ಆದರೂ ಒಟ್ಟಿನಲ್ಲಿ ಏನೋ ಬಿಗಿತ, ಏನೋಒಂದು ವಿಧವಾದ ಸ್ನಿಗ್ಧವಾತಾವರಣ ಅಂದಿನ ಸಭೆಯನ್ನುಆವರಿಸಿತ್ತು. ಲೀತೋಟದ ಕುಖ್ಯಾತ ಜಮೀನ್ದಾರ ಚೌ-ಚು, ಅಂತಿಮ ತೀರ್ಪಿಗಾಗಿ ಕಾದು ನಿಂತ ಕೈದಿಯಂತೆ ಒಂದು ಮೂಲೆಯಲ್ಲಿ ನಡುಗುತ್ತಾ ಕೈಕಟ್ಟಿಕೊಂಡು ನಿಂತಿದ್ದುದೇನೋ ಸರಿ; ಆದರೆ, ಅದೇ ರೀತಿ ಭಯಕ್ಕೀಡಾದ, ಜಮೀನ್ದಾರರ ಅಪಪ್ರಚಾರಕ್ಕೆ ಕಿವಿಕೊಟ್ಟಿದ್ದ ರೈತರ ಪಂಗಡ ಸಹ ಇದ್ದಿತು. ಅವರಿಗೆ ಎಲ್ಲೋ ಅಲ್ಪ ಸ್ವಲ್ಪ ಜಮೀನಿತ್ತು. ಜಮೀನು ಪುನರ್ವಿಂಗಡಣೆಯಾದಾಗ ಎಲ್ಲಿ ಆ ಸ್ವಲ್ಪ ಜಮೀನೂ ಹೊರಟುಹೋಗುತ್ತದೋ ಎಂದು ಅವರ ಜೀವ ಹೊಡೆದುಕೊಳ್ಳುತ್ತಿತ್ತು. ಉಗ್ರಾಣದ ಮಾಲಿಕ ಹು-ಪಿನ್-ಟ್ಯಾಂ, ಮೇಲುತೋರಿಕೆಗೆ ತಾನು ತೀರಾ ಬಡವನೆಂದು ತೋರಿಸುವುದಕ್ಕಾಗಿ,

ಚಿಂದಿ ಬಟ್ಟೆಯನ್ನುಟ್ಟು ಸಭೆಗೆ ಬಂದಿದ್ದ! ಭೂಸುಧಾರಣಾ ದಳದವರು ಬಂದಂದಿನಿಂದ ಅವನು ತನ್ನ ಅಂಗಡಿಯ ಗಲ್ಲದಮೇಲೆ ಕೂತೇ ಇರಲಿಲ್ಲ.

'ಪಂಡಿತ' ಸಿಯನ್ (ಇವನೊಬ್ಬ ಶ್ರೀಮಂತ ರೈತ)ನನ್ನು ಇನ್ನೊಂದು ವಿಧವಾದ ಯೋಚನೆ ಬಾಧಿಸಿತು. ಆ ದೊಡ್ಡ ಸಮಾರಂಭಕ್ಕೆ ತಕ್ಕ ಗಾಂಭೀರ್ಯವಿರಬೇಕೆಂದು ಆತ ತನ್ನ ಗೌನಿಗೆ, ಹಿಂದೊಮ್ಮೆ ತಾನು ರೈತ ಪ್ರತಿನಿಧಿಯಾಗಿದ್ದಾಗ ದೊರೆತ, ಕೆಂಪುಬಣ್ಣದ ರೇಷ್ಮೆಯ ಚಿಹ್ನೆಯನ್ನು ತಗುಲಿಸಿಕೊಂಡು ಬಂದಿದ್ದನು. ಜನರ ಗುಂಪಿನಲ್ಲಿ ಅತ್ತಿಂದಿತ್ತ ತಾನೇ ಎಲ್ಲ ಕಾರುಬಾರು ನಡೆಸುವವನಂತೆ ಓಡಾಡಿದನು. ಆದರೂ ತಾನು ಕಳೆದ ವರ್ಷ ಇಬ್ಬರು ಹೊಲಗೆಲಸದವರನ್ನಿಟ್ಟುಕೊಂಡಿದ್ದುದೂ, ದುಡ್ಡನ್ನು ಆಣೆ ಬಡ್ಡಿಗೆ ಕೊಡುತ್ತಿದ್ದುದೂ ಎಲ್ಲರಿಗೂ ತಿಳಿದಿದ್ದರಿಂದ ಅವನ ಮುಖ ಏನೋ ಒಂದು ತರಹೆಯ ವ್ಯಾಕುಲತೆಯನ್ನು ಪ್ರದರ್ಶಿಸುತ್ತಿತ್ತು. ಅಷ್ಟೇ ಅಲ್ಲದೆ, ಕಳೆದ ರಾತ್ರಿ ಭೂಸುಧಾರಣಾ ದಳದವರು ಕರೆದಿದ್ದ ರೈತ ಮುಂದಾಳುಗಳ ಸಭೆಗೆ ತನ್ನನ್ನು ಆಹ್ವಾನಿಸದಿದ್ದುದು ಅವನ ವ್ಯಾಕುಲತೆಯನ್ನು ಮತ್ತಷ್ಟು ಹೆಚ್ಚಿಸಿತು. ಮೇಲೆ ಸಂದರ್ಭಕ್ಕನುಗುಣವಾಗಿ ಸಂತೋಷ ವ್ಯಕ್ತಪಡಿಸುತ್ತಿದ್ದರೂ, ಅಂತರಾಳದಲ್ಲಿ ಅವ್ಯಕ್ತ ವೇದನೆ ತುಂಬಿಕೊಂಡಿತ್ತು.

ಹತ್ತೂಕಾಲು ಘಂಟೆಗೆ ಸರಿಯಾಗಿ ಹ್ಸಿಯಾಂಗ್ ಜಿಲ್ಲಾ ಸರ್ಕಾರದ ಅಧ್ಯಕ್ಷ ಯು-ಚಾಂಗ್‌ನು ನೀಲಿಬಣ್ಣದ ಪೋಷಾಕು ಧರಿಸಿ ವೇದಿಕೆಯನ್ನೇರಿದನು. ಅಲ್ಲಿ ಆಗಲೇ ಜಿಲ್ಲಾ ಕಮ್ಯೂನಿಸ್ಟ್ ಪಕ್ಷದ ಕಾರ್ಯದರ್ಶಿ ಸಿಯಾಂಗ್, ಗೃಹಕೈಗಾರಿಕೆ ಕೆಲಸಗಾರರ ಸಂಘದ, ರೈತಸಂಘದ ಮತ್ತು ವಾಣಿಜ್ಯಭವನದ ಅಧ್ಯಕ್ಷರುಗಳು, ಪ್ರಾಥಮಿಕಶಾಲೆಯ ಮುಖ್ಯೋಪಾಧ್ಯಾಯರು, ಮತ್ತು ಭೂಸುಧಾರಣಾದಳದ ಸದಸ್ಯರು ನೆರೆದಿದ್ದರು. ಯು-ಚಾಂಗ್‌ನು ಅಂದಿನ ಸಭೆಯ ಮೂರು ಪ್ರಮುಖ ಉದ್ದೇಶಗಳತ್ತ ಸಭಿಕರ ಗಮನವನ್ನು ಸೆಳೆದನು — ಭೂಸುಧಾರಣಾದಳದವರಿಗೆ ಸ್ವಾಗತವೀಯುವುದು ; ಪ್ರಸ್ತುತ ಪರಿಸ್ಥಿತಿಯನ್ನು ವಿವರಿಸಿ, ರೈತರಲ್ಲಿದ್ದ ತಪ್ಪುಭಾವನೆಗಳನ್ನು ಹೋಗಲಾಡಿಸುವಂತಹ ಜಿಲ್ಲಾಕಮ್ಯೂನಿಸ್ಟ್ ಪಕ್ಷದ ಕಾರ್ಯವರದಿಯನ್ನು ಪರಿಶೀಲಿಸುವುದು ; ಕೊನೆಯದಾಗಿ ಸುಧಾರಣಾದಳದ

ನಾಯಕರಾದ ಚಿ-ಮಿನ್‌ರವರು ಭೂಸುಧಾರಣೆಯ ಬಗ್ಗೆ ಜನತಾಸರ್ಕಾರದ ನೀತಿಯನ್ನು ವಿವರಿಸುವುದು.

ಸ್ವಾಗತಭಾಷಣವಾದಮೇಲೆ ಸಿಯಾಂಗ್ ವರದಿಯನ್ನೋದಲು ಪ್ರಾರಂಭಿಸಿದ : " ರೈತಬಾಂಧವರೇ, ನಾವು ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದ ಭೂಸುಧಾರಣೆಯನ್ನು ಜಾರಿಗೆ ತರುವ ಸುಸಂದರ್ಭ ಈಗ ಒದಗಿ ಬಂದಿದೆ. ಎಲ್ಲ ಸುಧಾರಣೆಗಳೂ ಒಂದು ಹೊಸ ವಾತಾವರಣವನ್ನುಂಟು ಮಾಡುತ್ತದೆ. ಪ್ರಾರಂಭದಲ್ಲಿ ಆ ಹೊಸದು ನಮಗೆ ನಾಕಷ್ಟು ಪರಿಚಯವಾಗಿರುವುದಿಲ್ಲ. ಅದ್ದರಿಂದ ನಾನಾಸಂಶಯಗಳು ತಲೆದೋರುವುದು ಸಹಜವೇ. ಆದರೆ ಈ ಸುಧಾರಣೆಯ ಬಗ್ಗೆ ಯಾವ ವಿಧವಾದ ಸಂದೇಹಕ್ಕೂ ಆಸ್ಪದವಿಲ್ಲ; ಆಧಾರವೂ ಇಲ್ಲ. ಆದರೂ ಕೆಲವು ರೈತರು ಸಂಶಯಗ್ರಸ್ತರಾಗಿರುವುದೂ ಆಶ್ಚರ್ಯವೇನಲ್ಲ. ನಾವಿರಾರು ವರ್ಷಗಳಿಂದ ದುರಾಶೆಯ ಊಳಿಗಮಾನ್ಯ ಅರ್ಥಿಕ ಪದ್ಧತಿ ನಿಮ್ಮ ಸುಖಜೀವನವನ್ನು ಕಸಿದುಕೊಂಡಿದ್ದೇ ಅಲ್ಲದೆ, ವಿದ್ಯಾರ್ಜನೆಗೂ ಅವಕಾಶವಿತ್ತಿಲ್ಲ. ಈಗ ವೃತ್ತಪತ್ರಿಕೆಗಳನ್ನು ಓದಿ ಜನತಾಸರ್ಕಾರದ ಧ್ಯೇಯಗಳನ್ನು ನೇರವಾಗಿ ಅರಿತುಕೊಳ್ಳಲಾಗದ ನಿಮ್ಮ ನಿರಕ್ಷರತೆಯನ್ನು ದುರುಪಯೋಗ ಪಡಿಸಿಕೊಂಡು, ಭೂಮಾಲಿಕರು ನಿಮ್ಮ ಮನಸ್ಸಿನಲ್ಲಿ ಅನೇಕ ರೀತಿಯ ಸಂಶಯಗಳನ್ನು ಬಿತ್ತಿ ನೀವು ಭೂಸುಧಾರಣೆಯನ್ನು ಸರಿಯಾಗಿ ನೆರವೇರಿಸದಂತೆ ಮಾಡಲು ಭಗೀರಥ ಪ್ರಯತ್ನ ಮಾಡುತ್ತಿದ್ದಾರೆ.

" ಚಿಯಾಂಗ್-ಕೈ-ಷೇಕ್ ಹಿಂದಿರುಗಿ ಬರುವನೆಂಬ ಕಟ್ಟು ಕತೆಯನ್ನು ಅವರು ಹರಡುತ್ತಿದ್ದಾರೆಂಬುದು ನನಗೆ ಗೊತ್ತು. ಆದರೆ ಹಾಗಾಗುವುದೆಂದು ಊಹಿಸುವುದೂ ಮೂಢತನದ ಪರಮಾವಧಿ ಅಷ್ಟೆ. ಸಂಗಾತಿಗಳೇ! ನಮ್ಮ ರಕ್ತವನ್ನು ಹೀರಿ ನಮ್ಮ ಮಕ್ಕಳನ್ನು ಕದ್ದ ಕೊಮಿಂಟಾಂಗ್ ಸೈನ್ಯವನ್ನು ನಮ್ಮ ಜನತಾಸೈನ್ಯವು ಸಮುದ್ರಕ್ಕೆ ತಳ್ಳಿ ಒಂದು ವರ್ಷದ ಮೇಲಾಯಿತು. ಈಗ ಹೆಸರಿಗೂ ಒಬ್ಬ ಕೊಮಿಂಟಾಂಗ್ ಸೈನಿಕ ನಮ್ಮ ದೇಶದಲ್ಲಿಲ್ಲ. ತೈವಾನಿನಲ್ಲಿ ಈಗಲೂ ಚಿಯಾಂಗ್-ಕೈ-ಷೇಕ್, ಕೆಲವು ಅನುಯಾಯಿಗಳೊಡನೆ ಇರುವುದೇನೋ ನಿಜ.(ತೈವಾನ್ ಅಥವಾ ಫಾರ್ಮೋಸಾ



ಭೂಸುಧಾರಣಾದಳದ ಬಂಧುಗಳಿಗೆ ಸುಸ್ವಾಗತ.

ಚೀಣಾದೇಶಕ್ಕೆ ಸೇರಿರುವ, ಅದರ ಮುಖ್ಯ ಭೂಭಾಗದಿಂದ ಸ್ವಲ್ಪ ದೂರದಲ್ಲಿರುವ ಒಂದು ದ್ವೀಪ. ಇದು ಈಗ ಚಿಯಾಂಗ್-ಕೈ-ಷೇಕ್‌ನ ವಶದಲ್ಲಿದೆ.—ಅಂದರೆ, ಸಂಪೂರ್ಣವಾಗಿ ಅಮೆರಿಕನರ ಹತೋಟಿಗೊಳಗಾಗಿದೆ. ಕೋರಿಯಾದ ಯುದ್ಧ ನೆಪದಿಂದ ಅಮೆರಿಕನ್ನರು ತಮ್ಮ ಮಿಲಿಟರಿಯ ಏಳನೇ ವಿಭಾಗವನ್ನು ಈ ದ್ವೀಪದಲ್ಲಿಟ್ಟಿದ್ದಾರೆ. ಅವರ ಅಪ್ಪಣೆಯಿಲ್ಲದೆ ಸುತ್ತಮುತ್ತಿನ ಸಮುದ್ರಭಾಗಗಳಲ್ಲಿ ಯಾವ ಹಡಗೂ ಹೋಗಲವಕಾಶವಿಲ್ಲ. ಅಮೆರಿಕನ್ ಸರ್ಪದ ಹೆಡೆಯ ನೆರಳಿನಲ್ಲಿ ಕಪ್ಪೆಯಂತೆ ಅವಿತುಕೊಂಡಿರುವ ಚಿಯಾಂಗ್-ಕೈ-ಷೇಕ್, ಇನ್ನೂ ಚೀನಾದೇಶದ ಸ್ವಾಮ್ಯ ಪಡೆಯುವ ಕನಸನ್ನು, ಈ ದ್ವೀಪದಲ್ಲಿ ಕುಳಿತುಕೊಂಡೇ ಕಾಣುತ್ತಿದ್ದಾನೆ.) ಆದರೆ ಅವರ ಆಯಸ್ಸು ಅತ್ಯಲ್ಪವೆಂಬುದರಲ್ಲಿ ಯಾರಿಗಾದರೂ ಸಂಶಯವಿದೆಯೇ ? ಪುನಃ ಈ ಭೂಮಿಯಮೇಲೆ ಕಾಲಿಡಲು ಅವರಿಗೆ ಧೈರ್ಯವೆಲ್ಲಿ ಬಂತು ? ಬರುವುದಾದರೆ ಬರಲಿ, ಅವರನ್ನು ಇನ್ನಷ್ಟು ಜಾಗ್ರತೆ ನಿರ್ನಾಮ ಮಾಡಲು ನಮಗೆ ಸಂತೋಷವೇಸರಿ !" ರೈತರು ನಕ್ಕರು. ಸೋತ ಕೊಮಿಂಟಾಂಗ್ ಸೈನ್ಯ ಹಿಂದಿರುಗುವಾಗ ಪಟ್ಟ ಪಾಡನ್ನು ಜ್ಞಾಪಿಸಿಕೊಂಡರು.

ಸಿಯಾಂಗ್‌ನು ಅನೇಕ ಸುಳ್ಳುಸುದ್ದಿಗಳನ್ನು ಖಂಡಿಸಿದನು. ಚಿಯಾಂಗನಿಗೆ ಅಮೆರಿಕನ್ ಸರ್ಕಾರ ಸಹಾಯ ಮಾಡುವುದಂತೆ ! ಆದರೆ ಈ ಮೊದಲೂ ಅವರು ಸಹಾಯ ಮಾಡಲಿಲ್ಲವೆ ? ಅಷ್ಟಕ್ಕೂ ಅಮೆರಿಕನ್‌ರಾದರೂ ಎಷ್ಟು ಶಕ್ತಿಶಾಲಿಗಳು ?—ಕೋರಿಯಾದಲ್ಲಿ ನಮ್ಮ ಜನತಾದಳದವರು ಅಮೆರಿಕನ್ ಸಾಮ್ರಾಜ್ಯಶಾಹಿಗಳಿಗೆ ಕೊಟ್ಟಿರುವ ಪೆಟ್ಟನ್ನು ಗಮನಿಸಿದರೆ, ಚಿಯಾಂಗನಿಗೆ ಅವರು ಕೊಡುತ್ತಿರುವ ಸಹಾಯದ ಯೋಗ್ಯತೆಯು ಅರಿವಾದೀತು ! (ಕೋರಿಯಾ ಚೀನಾಕ್ಕೆ ಸಮೀಪದಲ್ಲಿ, ಅದಕ್ಕೆ ಹೊಂದಿಕೊಂಡಿರುವ ದೇಶ. ಉತ್ತರಕೋರಿಯಾ ದಕ್ಷಿಣಕೋರಿಯಾ ಎಂದು ವಿಭಜಿಸಿದ್ದಾರೆ. ಇವೆರಡರ ಮಧ್ಯೆ ನಡೆದ ಅಂತರ್ಯುದ್ಧದಲ್ಲಿ ಅಮೆರಿಕಾವೂ ಕೈಹಾಕಿತು. ಚೀನಾದ ಕೈಗಾರಿಕಾ ಕೇಂದ್ರವಾದ ಮಂಚೂರಿಯಾ, ಕೊರಿಯಾಕ್ಕೆ ಹೊಂದಿಕೊಂಡಿದೆ. ಅಮೆರಿಕಾ, ಕೋರಿಯಾ

ಯುದ್ಧವನ್ನು ನೆಪವಾಗಿಟ್ಟುಕೊಂಡು, ಚೀನವನ್ನು ಆಕ್ರಮಿಸಲು ಯತ್ನಿಸಿ ವಿಫಲವಾಯಿತು. ಅಮೆರಿಕದ ಈ ದುರುದ್ದೇಶವನ್ನರಿತ ಚೀನೀ ಜನರು ನುರಿತ ಸ್ವಯಂಸೇವಕರುಗಳನ್ನು ಕೋರಿಯಾಕ್ಕೆ ಕಳುಹಿಸಿ, ಅಮೆರಿಕಕ್ಕೆ ತಕ್ಕ ಪಾಠ ಕಲಿಸಿದರು.) ಚಿಯಾಂಗನು ಆಗಲೇ ಹ್ಯಾನ್‌ಕೌಗೆ ಬಂದಿದ್ದಾನೆಂದು ಜಮೀನ್ದಾರರು ಹೇಳುತ್ತಿದ್ದಾರೆ. ಆದರೆ ನಲವತ್ತು ಲಕ್ಷ ಸೈನ್ಯದಿಂದ ನ್ಯಾನ್‌ಕಿಂಗ್‌ನ್ನು ಉಳಿಸಿಕೊಳ್ಳಲಾರದೇ ಹೋದವನು, ಒಂದಿಷ್ಟು ಪುಡಿಸೈನ್ಯದಿಂದ ಹ್ಯಾನ್‌ಕೌನ್ನುವಶಪಡಿಸಿಕೊಳ್ಳಲು ಸಾಧ್ಯವೇ? ಅದರಲ್ಲೂ ಅವನ ಬೆಂಬಲಿಗರಾದ ಅಮೆರಿಕನ್ನರೇ ಕೋರಿಯಾದಲ್ಲಿ ಸೋಲನ್ನನುಭವಿಸುತ್ತಿರುವಾಗ!"

ರೈತರು ಮತ್ತೊಮ್ಮೆ ನಕ್ಕರು. ಕೈ ಹುಣ್ಣು ನೋಡಿಕೊಳ್ಳಲು ಕನ್ನಡಿಯೇಕೆ?

"ಆದುದರಿಂದ ನಾವು ಈ ಭೂಸುಧಾರಣೆಯನ್ನು ಜಾರಿಗೆ ತರುವಾಗ ತಿಳಿಮನಸ್ಸಿನಿಂದ, ನಮ್ಮ ಶಕ್ತಿಯಲ್ಲಿ ಸಂಪೂರ್ಣ ನಂಬುಗೆಯಿಟ್ಟು ಮುನ್ನಡೆಯೋಣ. ಜಮೀನ್ದಾರರೂ ಕನಸು ಕಾಣುವುದನ್ನು ಬಿಡುವುದು ಒಳ್ಳೆಯದು, ಅವರ ಚಿಯಾಂಗ್ ಮರಳಿ ಬರದಂತೆ ಒಂದೇ ಬಾರಿಗೆ ಹೊರದೂಡಲ್ಪಟ್ಟಿದ್ದಾನೆ. ಆದ್ದರಿಂದ ತಮ್ಮಲ್ಲಿರುವ ಯುದ್ಧಸಾಮಗ್ರಿಗಳನ್ನೆಲ್ಲಾ ಒಪ್ಪಿಸಿ ಜನರಿಗೆ ಶರಣಾಗತರಾದರೆ ಅವರಿಗೇ ಕ್ಷೇಮ. ರೈತಬಂಧುಗಳೇ, ಈಗ ನಿಮ್ಮ ಭವಿಷ್ಯತ್ತನ್ನು ರೂಪಿಸುವವರು ನೀವೇಆಗಿದ್ದೀರಿ. ಭಯವಿನ್ನೇಕೆ?"

ಸಿಯಾಂಗ್‌ನ ಭಾಷಣ ಮುಗಿಯಿತು. ರೈತರು ಜೋರಾಗಿ ಚಪ್ಪಾಳೆ ತಟ್ಟಿದರು. ಶಿವು, ನೆಗೆದು ನಿಂತು **ಪಾಳೆಯಗಾರ ಭೂಮಾಲಿಕ ವರ್ಗದ ನಾಶವಾಗಲಿ** ಎಂದು ಕೂಗಿದನು. ಇಡೀ ರೈತ ಸಮೂಹವೇ ಅವನ ಘೋಷಣೆಯೊಡನೆ ಧ್ವನಿ ಸೇರಿಸಿತು.

ಸಭೆಯಲ್ಲಿದ್ದ ಜಮೀನ್ದಾರರು ಉಭಯ ಸಂಕಟಕ್ಕೀಡಾದರು. ಅವರೂ ಚಪ್ಪಾಳೆ ತಟ್ಟಲು ಪ್ರಯತ್ನಿಸಿದರು. ಆದರೆ ಕೈಗಳೆರಡೂ ಸೇರುತ್ತಿರಲಿಲ್ಲ.

ಅನಂತರ, ದಳದ ದಂಡನಾಯಕ ಚಿ-ಮಿನ್ ಮಾತನಾಡಲು ಎದ್ದು ನಿಂತ. ಅವನೊಬ್ಬ ಬಡರೈತ ವರ್ಗದಿಂದ ಬಂದ, ಕಷ್ಟ ಸಹಿಷ್ಣುವಾದ ನಾಯಕನಾಗಿದ್ದ. ದೇಶದಲ್ಲೆಲ್ಲಾ ಸುತ್ತಾಡಿ ಗಳಿಸಿದ್ದ ವಿಸ್ತಾರ ಅನುಭವ ಅವನ ಮುಖದಲ್ಲಿ ಎದ್ದುಕಾಣುತ್ತಿತ್ತು. ಸರಳವಾದ ಖಾಕಿ ಉಡುಪು. ಮಂದವಾದ ಮುಖಚರ್ಮ. ಜಪಾನರೊಡನೆ ಯುದ್ಧ ಮಾಡಿದ ಜ್ಞಾಪಕಾರ್ಥವಾಗಿ ಅವನ ಹಣೆಯ ಮೇಲೆ ಒಂದು ಕತ್ತಿಯ ಮಚ್ಚೆ ಇದ್ದಿತು.

"ಸಹೋದರರೇ! ನಾನು ಶಾನ್ಸಿ ಪ್ರಾಂತದವನು. ನನ್ನ ಉಚ್ಚಾರಣೆಯು ನಿಮಗೆ ತಿಳಿಯದೇ ಇದ್ದರೆ, ನನ್ನ ಭಾಷಣವು ಅರ್ಥವಾಗದೆ ಹೋದರೆ, ಕೊನೆಯಲ್ಲಿ ಪ್ರಶ್ನೆಗಳನ್ನು ಕೇಳಿ. ನಾವು ನಿಮ್ಮೊಡನೆಯೇ ಭೂಸುಧಾರಣೆ ಪೂರ್ಣವಾಗಿ ಆಗುವವರೆಗೂ ಇದ್ದು, ಈಗ ನಿಮಗೆ ತಿಳಿಯದೇ ಹೋಗುವ ವಿಷಯಗಳನ್ನೆಲ್ಲಾ ಸ್ಪಷ್ಟವಾಗಿ ವಿವರಿಸುವೆವು.

**"ರೈತಬಾಂಧವರೇ, ನಿಮ್ಮ ಜೀವಮಾನವನ್ನೆಲ್ಲಾ ನೀವು ಉಳುವುದಕ್ಕಾಗಿ ಮುಡುಪಿಟ್ಟಿದ್ದೀರಿ. ಉಳುವವನಿಗೇ ಹೊಲ ದೊರೆಯಬೇಕೆಂಬುದು ಬೇರೆಲ್ಲರಿಗಿಂತ ನಿಮಗೇ ಹೆಚ್ಚು ತಿಳಿದಿದೆ. ಊಳಿಗ ಮಾನ್ಯ ಪದ್ಧತಿಯು ವಿವರಿಸಲಸದಳವಾದಷ್ಟು ಕ್ರೂರವಾದದ್ದು. ಉತ್ತು, ಬಿತ್ತಿದವರಿಗೆ ಏನೂ ಇಲ್ಲ; ಏನೂ ಮಾಡದೆ ಸುಖಸಂತೋಷಗಳಲ್ಲಿಲೋಲುಪ್ತನಾದ ಜಮೀನ್ದಾರರಿಗೆ ಎಲ್ಲವೂ. ಹೀಗಿರುತ್ತಾ ವರ್ಷೇ ವರ್ಷೇ ಉತ್ಪಾದನೆ ಕಮ್ಮಿಯಾಗುತ್ತಿರುವುದರಲ್ಲಿ ಮತ್ತು ಬೆಲೆಏರುತ್ತಿರುವುದರಲ್ಲಿ ಆಶ್ಚರ್ಯವೇನಿದೆ?**

"ಹತ್ತಿಯನ್ನು ಉದಾಹರಣೆಗಾಗಿ ತೆಗೆದುಕೊಳ್ಳಿ. ನಾವು ಸಾಕಷ್ಟು ಹತ್ತಿ ಬೆಳೆಯದಿದ್ದುದರಿಂದ ಹತ್ತಿ ಕೈಗಾರಿಕೆ ಅಭಿವೃದ್ಧಿ ಹೊಂದಲಿಲ್ಲ. ತತ್ಫಲವಾಗಿ ಬಟ್ಟೆಯ ಬೆಲೆ ಹೆಚ್ಚಿ ನಾವೆಲ್ಲ ಹರಕು ಬಟ್ಟೆಯನ್ನೇ ಉಡಬೇಕಾಗುತ್ತಿತ್ತು. ವ್ಯಾಪಾರಗಾರರಿಗೂ ಹೆಚ್ಚು ಲಾಭವಿರಲಿಲ್ಲ. ಏಕೆಂದರೆ ಅವರು ಕೊಳ್ಳುವ ಶಕ್ತಿಯಿಂದ ಕೆಲವೇ ಶ್ರೀಮಂತರನ್ನು ಅವಲಂಬಿಸಬೇಕಾಗಿತ್ತು. ಭೂಸುಧಾರಣೆಯಾದ ಮೇಲೆ, ರೈತರು ಹೆಚ್ಚು ಹತ್ತಿ ಬೆಳೆಯುವರು; ಕೈಗಾರಿಕೆ ಪ್ರಗತಿ ಪಡೆಯುವುದು; ವ್ಯಾಪಾರಗಾರರಿಗೂ ಲಾಭ

ದೊರಕುವುದು, ಏಕೆಂದರೆ ಆಗ ಕೊಳ್ಳುವ ಶಕ್ತಿ ಪಡೆದ ಇಡೀ ರೈತ ಸಮೂಹವೇ ಅವರ ಗಿರಾಕಿಯಾಗುತ್ತದೆ."

ಸಭೆಯಲ್ಲಿ ಎಲ್ಲರೂ ಸಮ್ಮತಿಯನ್ನು ಸೂಚಿಸುತ್ತಾ ತಲೆದೂಗಿದರು.

"ಹೊಟ್ಟೆಬಟ್ಟೆಗೇ ಹಗಲಿರುಳೂ ದುಡಿಯುತ್ತಿದ್ದರೆ, ಓದು ಕಲಿಯಲು ಅನುಕೂಲ-ಉತ್ಸಾಹ ಎಲ್ಲಿರುತ್ತದೆ. ದೇಶದ ಜನ ಸಂಖ್ಯೆಯ ಹತ್ತು ಜನರಲ್ಲಿ ೮ ಜನ ರೈತರು. ೮ ಜನ ರೈತರಲ್ಲಿ ೭ ಜನ ಅವಿದ್ಯಾವಂತರು. ಪಾಳೆಯಗಾರರ ಸುಲಿಗೆಗೆ ಸಿಕ್ಕಿ ಬಿದ್ದಿರುವವರೆಗೂ ಅವರು ನಿಜವಾಗಿ ನಮ್ಮ ದೇಶದ, ಬೆನ್ನುಮೂಳೆಯಾಗಲಾರರು. ಜಮೀನ್ದಾರೀ ಭೂಪದ್ಧತಿಯನ್ನು ನಿರ್ಮೂಲಮಾಡದೆ ಹೋದರೆ, ನಿಜವಾಗಿಯೂ ಬಲಿಷ್ಠವಾದ, ಸ್ವತಂತ್ರವಾದ, ಸಮೃದ್ಧವಾದ ನಾಡನ್ನು ನಾವು ನಿರ್ಮಿಸಲು ಹೇಗೆ ಸಾಧ್ಯ?

"ನಮ್ಮ ದೇಶದ ಪ್ರಗತಿಗೆ ಅಡ್ಡಿಬರುತ್ತಿರುವ ಆತಂಕಗಳಲ್ಲಿ ಮುಖ್ಯವಾದುದು ಮತ್ತು ಮೂಲಭೂತವಾದುದು, ಈ ಜಮೀನ್ದಾರೀ ಪದ್ಧತಿ. ಅದು ನಮ್ಮನ್ನು ಬಡವರನ್ನಾಗಿ, ಹಿಂದುಳಿದವರನ್ನಾಗಿ, ನಿಶ್ಶಕ್ತರನ್ನಾಗಿ ಮಾಡಿ, ಸಾಮ್ರಾಜ್ಯಶಾಹಿಗಳಿಗೆ ಸುಲಭವಾಗಿ ಬಲಿಕೊಟ್ಟಿತು. ಇನ್ನು ಮುಂದೆ ಎಂದೆಂದಿಗೂ ಹೀಗಾಗದಂತೆ ನಾವು ಜಾಗೃತರಾಗಿರಬೇಕು.

"೧೯೨೭ ರಿಂದ, ಯಾಂಗ್‌ಟ್ಸೆ ನದಿಯ ಅಕ್ಕಪಕ್ಕದ ಪ್ರದೇಶಗಳಲ್ಲಿ ಭೂಸುಧಾರಣೆ ಜಾರಿಗೆ ತರಲ್ಪಡುತ್ತಿದೆ. ಅಲ್ಲಿ ನಮಗೆ ದೊರೆತ ವಿಶೇಷ ಅನುಭವಗಳು ಮತ್ತು ಸರಿ-ತಪ್ಪುಗಳ ತಿಳುವಳಿಕೆಯನ್ನೆಲ್ಲಾ 'ಭೂಸುಧಾರಣಾಶಾಸನ'ದಲ್ಲಿ ಕ್ರೋಢೀಕರಿಸಿದ್ದೇವೆ. ನಮ್ಮ ಕೇಂದ್ರ ಜನತಾ ಸರ್ಕಾರವು ಈ ವರ್ಷ ಇದನ್ನು ಅಂಗೀಕರಿಸಿದೆ. ಆದ್ದರಿಂದ ನಮ್ಮ ವಿಮೋಚನಾ ಚಳವಳಿಯಲ್ಲಿ ನಾವು ಈ ಶಾಸನವನ್ನು ಅನುಸರಿಸಿ ನಡೆಯಬೇಕು.

ಭೂಸುಧಾರಣೆಯನ್ನು ನಿಜವಾಗಿಯೂ ಒಂದು, ಭೂಮಿ ಯನ್ನು ನಡುಗಿಸುವ ಘಟನೆಯೆಂದು ಕರೆಯಬಹುದು. ಸಾವಿರಾರು ವರ್ಷಗಳಿಂದ ರೈತರ ಹೆಗಲೇರಿ ದಬ್ಬಾಳಿಕೆ ನಡೆಸುತ್ತಿದ್ದ ಜಮೀನ್ದಾ ರರು, ಈಗ ಜನತಾ ಪ್ರಜಾಪ್ರಭುತ್ವ ಸರ್ವಾಧಿಕಾರಕ್ಕೆ—ಜನತೆಯ ಆಳ್ವಿಕೆಗೆ—ಶರಣಾಗಬೇಕು. ಹಿಂದೆ ಸುಲಿಗೆಗೆ ಸಿಕ್ಕಿದ್ದ ರೈತಕೂಲಿ ಗಾರರು, ಬಡ ಮತ್ತು ಮಧ್ಯಮ ರೈತರು ಮತ್ತಿತರ ಮರ್ದಿತ ವರ್ಗದವರು ಈಗ ಅಧಿಕಾರಸ್ಥಾನಕ್ಕೇರುವರು. ಅವರ ಜೀವನ ಮಟ್ಟವನ್ನು ಉತ್ತಮಗೊಳಿಸಿ, ಅವರ ಅಧಿಕಾರವನ್ನು ಹೆಚ್ಚಿಸು ವುದೇ ಭೂಸುಧಾರಣೆಯ ಹೆಗ್ಗುರಿ. ಇದನ್ನೇ ನಾವು "ವಿಮೋಚನೆ'' ಎಂದು ಕರೆಯುವುದು.

"ಪ್ರತಿಯೊಬ್ಬ ಭೂಸುಧಾರಣೆಯ ಬೆಂಗಲಿಗನೂ ರೈತನ ಅಭಿಪ್ರಾಯಕ್ಕೆ, ಅವನ ಹಿತರಕ್ಷಣೆಗೆ ಹೆಚ್ಚು ಗಮನವೀಯಬೇಕು. ರೈತ, ಕೂಲಿಗಾರ ಬಡಮಧ್ಯಮರೈತರ ಐಕ್ಯಮತ್ಯವೇ, ಹಳ್ಳಿಗಳಲ್ಲಿ ಜನತಾ ಸರ್ವಾಧಿಕಾರದ ರಕ್ಷಣೆಗೆ ತಕ್ಕ ಸಾಧನ. ಅದರಲ್ಲೂ ರೈತಕೂಲಿಗಾರರು ಮತ್ತು ಬಡರೈತರು ಗ್ರಾಮಾಂತರಗಳ ಭೂ ಕ್ರಾಂತಿಗೆ ಬೆನ್ನೆಲುಬಿನಂತಿರಬೇಕು ಅವರೂ ತಮ್ಮ ಜವಾಬ್ದಾರಿಯ ನ್ನರಿತು ಕೂಡಲೇ ಜಾಗ್ರತರಾಗಿರಬೇಕು.

"ನಿರ್ಭಯವಾಗಿ ಮುನ್ನುಗ್ಗಿರಿ! ಕೂಲಿಗಾರರು. ಕಮ್ಯೂನಿಸ್ಟ್ ಪಕ್ಷ, ಜನತಾಸೈನ್ಯ ಮತ್ತು ಜನತಾ ಸರ್ಕಾರ-ಇಲ್ಲಿ ನಿಮಗಾಗಿ ಹೋರಾ ಡಲು, ನಿಮಗೆ ಬೇಕಾದಷ್ಟು ನೆರವು ನೀಡಲು ಸಿದ್ಧವಾಗಿವೆ. ಮತ್ತೆ ಮರೆಯದಿರಿ–ಅಧ್ಯಕ್ಷ ಮಾವೋ-ಟ್ಸೆ-ಟುಂಗ್ ನಿಮ್ಮ ನಾಯಕರಾಗಿದ್ದಾರೆ"

ಹೀಗೆ ಹೇಳಿದ ನಂತರ ಚಿ-ಮಿನ್ ಆ ಪ್ರದೇಶದ ಭೂಸುಧಾರಣೆಯ ವಿವಿಧ ಸಮಸ್ಯೆಗಳ ಬಗ್ಗೆ ಸುದೀರ್ಘ ವಿವರಣೆಯನ್ನಿತ್ತು ಜನತಾಸೈನ್ಯದ ಸದಸ್ಯರು, ಹುತಾತ್ಮರ ಅವಲಂಬಿಗಳು, ವ್ಯಾಪಾರಗಾರರು ಮತ್ತಿತರರು

ಬೇರೆ ಕೆಲಸಗಳ ನಿಮಿತ್ತ ವ್ಯವಸಾಯ ಮಾಡದೆ ತಮ್ಮ ಸ್ವಲ್ಪ ಭಾಗ ಭೂಮಿಯನ್ನು ಗುತ್ತಿಗೆಗೆ ಕೊಟ್ಟರೂ, ಅವರನ್ನು ಜಮೀನ್ದಾರರ ಗುಂಪಿಗೆ ಸೇರಿಸುವುದಿಲ್ಲವೆಂದು ತಿಳಿಸಿದನು. ಹಾಗೆಯೇ ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ, ಶ್ರೀಮಂತ ರೈತ ಆರ್ಥಿಕ ಪದ್ಧತಿಯನ್ನೇ ವ್ಯವಸಾಯ ಕ್ಷೇತ್ರದಲ್ಲಿ ಸ್ವಲ್ಪ ಸಮಯದವರೆಗೆ ಬೆಳೆಯಗೊಡಬೇಕೆಂದೂ ವಿಶದಪಡಿಸಿದನು. ಜಮೀನ್ದಾರಿ ವರ್ಗ, ದೇಶದ ಪ್ರಥಮ ಶತ್ರು. ಮತ್ತು ಅದರ ವಿರುದ್ಧ ಹೋರಾಡುವ ಎಲ್ಲ ವರ್ಗಕ್ಕೂ ಉತ್ತೇಜನ ದೊರಕುವುದೆಂದನು. ಹಳ್ಳಿ ಮತ್ತು ಪಟ್ಟಣಗಳ ಮಧ್ಯೆ ಸರಕುಗಳ ವಿನಿಮಯ ಸುಲಭವಾಗಿ, ಅಡ್ಡಿ-ಆತಂಕಗಳಿಲ್ಲದೆ ನಡೆದರೆ, ದೇಶದ ಆರ್ಥಿಕ ಪ್ರಗತಿ ಕ್ರಾಂತಿಕಾರಕ ರೀತಿಯಲ್ಲಿ ಆಗುವುದೆಂದು ಒತ್ತಿ ಹೇಳಿದನು.

ಕೈಗಾರಿಕೋದ್ಯಮಿಗಳು ಮತ್ತು ವ್ಯಾಪಾರಗಾರರ ಬಗ್ಗೆ ಮಾತನಾಡುತ್ತಾ ಆವನು ಹೀಗೆ ನುಡಿದನು: "ನೀವು ನಿಮ್ಮ ವ್ಯಾಪಾರವನ್ನು ಪಟ್ಟಣಗಳಲ್ಲಿ ಹೆಚ್ಚಿಸಲು ಕಷ್ಟಪಡಿ. ಜಮೀನು, ಮನೆ-ಮಠ ಮತ್ತು ವ್ಯವಸಾಯ ಸಾಮಗ್ರಿಗಳನ್ನು ನಿಮ್ಮಲ್ಲೇ ಗುಡ್ಡೆ ಹಾಕಿಕೊಂಡು ರೈತರನ್ನು ಸುಲಿಗೆಗೀಡುಮಾಡಬೇಡಿ. ಹಿಂದೆ, ಕೇವಲ ಶೇ. ೧೦ ಜನ ಜಮೀನ್ದಾರರು ಮತ್ತು ಶ್ರೀಮಂತ ರೈತರು ನಿಮ್ಮ ಗಿರಾಕಿಗಳಾಗಿದ್ದರೆ, ಇನ್ನು ಮುಂದೆ ಅಧಿಕ ಸಂಖ್ಯೆಯ ರೈತರೂ ನಿಮ್ಮಲ್ಲಿ ವ್ಯಾಪಾರಕ್ಕಾಗಿ ಬರುವರು. ಆಗ ನಿಮಗೆ ಯಾವುದು ಶ್ರೇಯಸ್ಕರವೆಂದು ಅರಿವಾಗುವುದು.''

ಜಮೀನ್ದಾರರನ್ನುದ್ದೇಶಿಸಿ, ದರ್ಪದಿಂದ ಹೀಗೆ ಎಚ್ಚರಿಸಿದ :

"ನಿಮಗೆ ಈಗ ಎರಡು ದಾರಿಗಳಿವೆ. ಒಂದು ಉಜ್ವಲ ಭವಿಷ್ಯತ್ತಿನ ದಾರಿ: ಅದು, ತಪ್ಪೊಪ್ಪಿಗೆ, ಪಶ್ಚಾತ್ತಾಪದ ಮತ್ತು ಸುಧಾರಿತ ಮನೋಭಾವದ ದಾರಿ. ನಿಮ್ಮ ಭೂಮಿ-ಕಾಣಿ, ನಾಕುಪ್ರಾಣಿಗಳು, ವ್ಯವಸಾಯ ಸಾಮಗ್ರಿಗಳು ಮತ್ತು ಅತ್ಯಧಿಕವಾಗಿ ಸಂಗ್ರಹಿಸಿರುವ ದವಸ ಧಾನ್ಯಗಳನ್ನು ಸುರಕ್ಷಿತವಾಗಿಡಿ, ಮತ್ತು ಭೂಸುಧಾರಣೆಯ ಸಮಯ

ಬಂದಾಗ, ಕಾನೂನಿಗನುಗುಣವಾಗಿ ಎಲ್ಲವನ್ನೂ ಒಪ್ಪಿಸಿ. ಆಗ ರೈತರು ಖಂಡಿತವಾಗಿಯೂ ಆದರಿಸುವರು. ನಿಮಗೂ ಎಲ್ಲರಂತೆ ಸಮಪಾಲು ಭೂಮಿ ದೊರಕುವುದು ಮತ್ತು ಶ್ರಮವಹಿಸಿ ದುಡಿಯುವುದರ ಮೂಲಕ ಸುಸಂಸ್ಕೃತರಾಗಲು ಅವಕಾಶ ಸಿಗುವುದು.

" ಇನ್ನೊಂದು ದಾರಿ, ನಿಮ್ಮ ಅವನತಿಗೆ ಮೂಲವಾದುದು. ಅದೇ ಪೆಂಗ್‌ಟೆಂಗ್ ಮತ್ತು ಲೋ-ಪೈ-ಜಂಗ್ ಹಿಡಿದ ದಾರಿ. ಅವರು ಸಂಚು ನಡೆಸಿ, ಶಾಂತ ವಾತಾವರಣವನ್ನು ಕದಡಲೆತ್ನಿಸಿದರು. ಈಗ ಅವರು ಜನತೆಯ ವಿಚಾರಣೆಗೆ ಕಾದು ನಿಂತ ಕೈದಿಗಳಾಗಿದ್ದಾರೆ. ಈ ತರಹೆಯ ಜಮೀನ್ದಾರರು ಜನತೆಯ ನ್ಯಾಯದ ದೀರ್ಘ ಬಾಹುಗಳಿಂದ ಎಂದಿಗೂ ನುಸುಳಿಕೊಂಡು ಹೋಗಲಾರರು.. ....."

ಚಿ-ಮಿನ್‌ನ ಭಾಷಣ ಮುಗಿಯಿತು. ಮೊದಮೊದಲು ತನ್ನ ಅಪರಿಚಿತ ಉಚ್ಚಾರಣೆಯಿಂದ ಸಭಿಕರಿಗೆ ತಾನು ಹೇಳುತ್ತಿರುವ ವಿಷಯ ತಿಳಿಯುವುದೋ ಇಲ್ಲವೋ ಎಂಬ ಶಂಕೆ ಅವನಿಗಿತ್ತು. ಆದರೆ ಕೇಳುವವರ ನಗೆಮುಖ ಮತ್ತು ಪ್ರತಿಕ್ರಿಯೆಗಳನ್ನು ಗಮನಿಸಿದಾಗ ತನ್ನ ಮಾತು ಎಲ್ಲರಿಗೂ ತಿಳಿಯುತ್ತಿದೆಯೆಂದು ಅವನಿಗೆ ಎಷ್ಟೋ ತೃಪ್ತಿಯಾಯಿತು.

ಇದಾದ ಮೇಲೆ ಗೃಹಕೈಗಾರಿಕೆಯ ಕೆಲಸಗಾರರ ಸಂಘದ ಅಧ್ಯಕ್ಷ ಪಾನ್-ಚಿ-ಚಾ ಮಾತನಾಡಿದ. ಕೂಲಿಕಾರರು ಮತ್ತು ರೈತರು ಇಬ್ಬರೂ ಒಂದಾಗಿ ನವಚೀಣದ ನಿರ್ಮಾಣಕಾರ್ಯದಲ್ಲಿ ತೊಡಗಬೇಕು; ಕೂಲಿಕಾರರು ರೈತರ ವಿಮೋಚನಾಚಳವಳಿಗೆ ಸಂಪೂರ್ಣ ಸಹಕಾರ ನೀಡುವರು-ಎಂಬುದೇ ಅವನ ಭಾಷಣದ ಸಾರಾಂಶ. ಪಾನ್-ಚಿ-ಚಾ ಒಬ್ಬ ಕಮ್ಮಾರ ಕೆಲಸದವ. ತಾನು ಜನತಾಸೈನ್ಯಕ್ಕೆ ಬೇಕಾದ ಆಯುಧ ಸಾಮಗ್ರಿಗಳನ್ನು ಕೃಷಿಕಾರರಿಗೆ ಬೇಕಾದ ಉತ್ತಮ ಸಲಕರಣೆಗಳನ್ನೂ ಹೆಚ್ಚು ಪ್ರಮಾಣದಲ್ಲಿ ಶೀಘ್ರವಾಗಿ ತಯಾರಿಸಿ ತನ್ಮೂಲಕ ಸೇವೆ ಸಲ್ಲಿಸುವೆನೆಂದು ಪ್ರಮಾಣ ಮಾಡಿದ.

ಅನಂತರ ಹುಯಿಲುಂಗ್ ಪ್ರಾಂತದ ರೈತಸಂಘದ ಅಧ್ಯಕ್ಷ ಯೆನ್-ಷು-ಚೆಂಗ್, ರೈತರ ಪರವಾಗಿ ಮಾತಾಡಿದನು. ರೈತರೆಲ್ಲ ಒಗ್ಗಟ್ಟಾಗಿ

ಜಮೀನ್ದಾರರಿಂದ ಸರ್ಕಾರದ ಭೂಸುಧಾರಣಾ ಶಾಸನದ ಪ್ರಕಾರ, ಭೂಮಿಯನ್ನು ಪಡೆಯಬೇಕೆಂದು ಮನವಿ ಮಾಡಿಕೊಂಡ. **ಕೈಗಾರಿಕೆ ಮತ್ತು ವ್ಯಾಪಾರೋದ್ಯಮಗಳಿಗಾಗಿ ಜಮೀನ್ದಾರರು ಉಪಯೋಗಿಸುತ್ತಿದ್ದ ಸ್ವತ್ತನ್ನು ಮಾತ್ರ ಯಾರೂ ವಶಪಡಿಸಿಕೊಳ್ಳಬಾರದೆಂದೂ ಒತ್ತಿ ಹೇಳಿದ.**

ಮಧ್ಯಾಹ್ನದ ವೇಳೆಗೆ ಸಭೆ ಮುಕ್ತಾಯವಾಯಿತು. ಜನರು ಮನೆಗಳಿಗೆ ಹಿಂದಿರುಗುವಾಗ ದಾರಿಯುದ್ದಕ್ಕೂ ಮಾತನಾಡುತ್ತಾ, ಚರ್ಚಿಸುತ್ತಾ ಹೋಗುತ್ತಿದ್ದರು. ತನಗೆ ಸಭೆಯಲ್ಲಿ ಭಾಷಣಮಾಡಲು ಅವಕಾಶ ಸಿಗದಿದ್ದುದರಿಂದ 'ಪಂಡಿತ, ಸಿಯುನ್‌ನ, ಮನಸ್ಸು ಕನವಿಸಿಗೊಂಡಿತ್ತು. ಜನರ ಗುಂಪಿನೊಡನೆ ಸೇರಿಕೊಂಡು ಅಂದು ಭಾಷಣ ಮಾಡಿದವರ ಬಗ್ಗೆ ಪರೋಕ್ಷವಾಗಿ ಹಾಸ್ಯಮಾಡುತ್ತಾ ಟೀಕಿಸುತ್ತಿದ್ದ: "ಕಾಮ್ರೇಡ್ ಚಿ-ಮಿನ್‌ನ ಭಾಷಣವೇನೋ ಚೆನ್ನಾಗಿತ್ತು. 'ಜನತೆಯ ನ್ಯಾಯದ ದೀರ್ಘಬಾಹು' ವಿನ ಬಗ್ಗೆ ಅಷ್ಟೊಂದು ಮಾತನಾಡಿದ, ಅವನು ಪೆಂಗ್-ಟೆಂಗ್ ಮತ್ತು ಲೋ-ಪೈ-ಜಂಗ್ ಇಬ್ಬರ ಹೆಸರನ್ನು ಮಾತ್ರ ಹೇಳಿದನೇ ಹೊರತು ದಂಡನೆಯನ್ನು ಮೆಲ್ಲಗೆ ತಪ್ಪಿಸಿಕೊಂಡು ಓಡಿಹೋದ ಪೆಂಗ್-ಎರಡನೇ ಹುಲಿಯ ಹೆಸರನ್ನೇಕೆ ಹೇಳಲಿಲ್ಲ?"

ಇದನ್ನು ಕೇಳಿಸಿಕೊಂಡ ಸಿಎವು ಹೇಳಿದ: "ಏನೂ ಯೋಚನೆಮಾಡಬೇಡಿ. ಅವನನ್ನೂ ಒಂದು ದಿನ ಹಿಡಿದು ತರುತ್ತೇವೆ. ಆಗ ನೋಡುವಿರಂತೆ."

ವಿಷಯಸಂಗ್ರಹಣಕ್ಕೆ ಸಂಬಂಧಿಸಿದ ಸಭೆಗಳನ್ನು ಇನ್ನೆರಡು ದಿನಗಳಲ್ಲೇ ಮುಗಿಸಿ, ಆದಷ್ಟು ಜಾಗ್ರತೆ ಕಾರ್ಯಕರ್ತರುಗಳು ಪ್ರತಿಯೊಂದು ಹಳ್ಳಿಯ ಒಳಹೊಕ್ಕು ಕ್ರಮವಾದ ಭೂಸುಧಾರಣೆಯನ್ನು ಪ್ರಾರಂಭಿಸಬೇಕೆಂದು ನಾಯಕ ಚಿ-ಮಿನ್‌ನು ತೀರ್ಮಾನಿಸಿದನು. ಮೊದಲು ಹಳ್ಳಿಯ ಶ್ರದ್ಧಾವಂತ ಸ್ವಯಂಸೇವಕರ ಸಭೆ ನಡೆಯಿತು. ದಳದ ಹತ್ತು ಮಂದಿ ಸದಸ್ಯರು, ಹ್ಸಿಯಾಂಗ್ ಜಿಲ್ಲಾಸರ್ಕಾರದ ಅಧ್ಯಕ್ಷ ಯು-ಚಾಂಗ್‌ನಿತ್ತ ಸ್ಥಳೀಯ ಸ್ಥಿತಿಗತಿಗಳ ಮಾಹಿತಿಯನ್ನು ತಮ್ಮ ಪುಸ್ತಕಗಳಲ್ಲಿ ಗುರ್ತು

ಹಾಕಿಕೊಂಡರು. "ಈ ತಾಲ್ಲೂಕಿನಲ್ಲಿ ಒಟ್ಟು ೨,೧೨೭ ಒಕ್ಕಲುಗಳಿವೆ; ಜನಸಂಖ್ಯೆ ೬೯೮೯ ; ಒಟ್ಟು ಒಂಭತ್ತು ಹಳ್ಳಿಗಳಿವೆ ; ೧,೫೨೭ [unclear: ಟೌ]ಅಕ್ಕಿ ಬೆಳೆಯುವ ಗದ್ದೆ ; ೪೭೦ಟೌ ಹತ್ತಿ ಬೆಳೆಯುವ ಹೊಲ ; ಜಮೀನಿನ ಒಡೆತನ ಕೆಲವು ವ್ಯಕ್ತಿಗಳ ಕೈಲಿ ಕೇಂದ್ರೀಕೃತವಾಗಿದೆ, ಉದಾಹರಣೆಗೆ, ಲೋ-ಪೈ-ಜಂಗ್‌ನೇ ೯೦ ಟೌ ಜಮೀನನ್ನು ಹೊಂದಿದ್ದಾನೆ.

"ಈ ತಾಲ್ಲೂಕಿನ ಉತ್ತರದಲ್ಲಿ ಪಿರ್ಜ ನದಿ, ಪಶ್ಚಿಮದಲ್ಲಿ ಲಿಯಾರ್ ಚೆಂಗ್‌ನದಿ ಮತ್ತು ದಕ್ಷಿಣದಲ್ಲಿ ಷಾಹೋನದಿ ಹರಿಯುತ್ತಿವೆ. ಆಗಾಗ್ಗೆ ಈ ನದಿಗಳ ಪ್ರವಾಹದಿಂದ ಸುತ್ತಮುತ್ತಿನ ಜಮೀನಿಗೆ ವಿಪರೀತ ನಷ್ಟವಾಗುತ್ತದೆ.

"ಈ ತಾಲ್ಲೂಕು ಅನೇಕ ವರ್ಷಗಳವರೆಗೆ ಜಪಾನೀಯರ ವಶದಲ್ಲಿದ್ದು ತುಂಬ ಪೆಟ್ಟುತಿಂದಿದೆ. ಅನೇಕ ರೈತರು ಅವರೊಡನೆ ಹೋರಾಡಿ ಪ್ರಾಣ ತೆತ್ತಿದ್ದಾರೆ. ಸೋವಿಯಟ್ ಮಹಾಕ್ರಾಂತಿಯಲ್ಲಿ ಭಾಗವಹಿಸಿ ನುರಿತ ಹಲವಾರು ಪ್ರತಿಭಾವಂತ ಸಂಘಟಕರು ಇಲ್ಲಿರುವರು. (ನವಂಬರ್ ೭, ೧೯೧೭ರಂದು ಸೋವಿಯಟ್ ರಷ್ಯಾದಲ್ಲಿ ಕಮ್ಯೂನಿಸ್ಟ್ ಪಾರ್ಟಿಯ ನೇತೃತ್ವದಲ್ಲಿ ಮಹಾಕ್ರಾಂತಿ ನಡೆದು ಅಲ್ಲಿನವರೆಗೂ ಸ್ವೇಚ್ಛೆಯಾಗಿ ನಿರಂಕುಶ ಪ್ರಭುತ್ವ ನಡೆಸುತ್ತಿದ್ದ ಜಾರ್‌ಷಾಹಿಯ ನಿರ್ನಾಮವಾಯಿತು. ಲೆನಿನ್ ಈ ಮಹಾಕ್ರಾಂತಿಯ ಶಿಲ್ಪಿ. ಈ ಕ್ರಾಂತಿಯ ಫಲವಾಗಿ ಜಗತ್ತಿನಲ್ಲೇ ಮೊಟ್ಟಮೊದಲಿಗೆ ಕೂಲಿಗಾರರ ರಾಜ್ಯ ಸ್ಥಾಪಿತವಾಯಿತು. ಅಂದಿನಿಂದ ಈ ರಾಜ್ಯ ಸತತವಾಗಿ ಅಭಿವೃದ್ಧಿ ಪಡೆದು ಮಿಕ್ಕ ರಾಷ್ಟ್ರಗಳ ದಲಿತ ಜನಾಂಗಗಳಿಗೆ ಸ್ಫೂರ್ತಿದಾಯಕವಾಗಿಯೂ, ಮಾರ್ಗದರ್ಶಕವಾಗಿಯೂ ಬೆಳಗುತ್ತ ಬಂದಿದೆ. ಕ್ರಾಂತಿಯ ದೆಸೆಯಿಂದಾಗಿ ಅತ್ಯಂತ ಹಿಂದುಳಿದಿದ್ದ ರಷ್ಯಾ ಇಂದು ಪ್ರಪಂಚದ ಅಗ್ರ ರಾಷ್ಟ್ರಗಳಲ್ಲಿ ಪ್ರಮುಖವಾಗಿದೆ. ಅಲ್ಲದೆ, ಮಾರ್ಕ್ಸ್-ಎಂಗೆಲ್ಸ್‌ರ ತತ್ವಗಳ ಸತ್ವ ಸತ್ಯತೆಗಳನ್ನು ತಿಳಿಯಲು ಈ ರಾಷ್ಟ್ರವೊಂದು ನಿದರ್ಶನವಾಗಿದೆ.) ಆದ್ದರಿಂದಲೇ ೨೨ವರ್ಷಗಳ ಕೋಮಿಂಟಾಂಗ್ ಆಡಳಿತದಲ್ಲಿ ಜಮೀನ್ದಾರರು ಈ ತಾಲ್ಲೂಕಿನಲ್ಲಿ ಹೆಚ್ಚು ಕ್ರೌರ್ಯದಿಂದ

ವರ್ತಿಸಿದ್ದಾರೆ. ಇಲ್ಲಿ ೭-೮ ಮಂದಿ ಕ್ರೂರ ಜಮಿನ್ದಾರರಿದ್ದಾರೆ. ಸ್ಕಲು ಹಳ್ಳಿಯ ಪೆಂಗ್‌ರಿಬ್ಬರು ಇವರಲ್ಲೆಲ್ಲಾ ತೀರ ಘಾತುಕರು.

'ಸುಳಿ' ಎಂಬ ದ್ರೋಹಿಗಳ ಪಕ್ಷವು ಈ ಪ್ರದೇಶದಲ್ಲಿದೆ. ಮೊದಲು ೫೬೦ ಸದಸ್ಯರಿದ್ದ ಈ ಪಕ್ಷವು ಪ್ರಭಾವಶಾಲಿಯಾಗಿತ್ತು. ಮೋಸದ ಹೇಳಿಕೆಗಳಿಗೆ ಬಲಿಯಾದ ಕೂಲಿಕಾರರೈತರೂ ಮತ್ತು ಬಡರೈತರೂ ಶೇ. ೮೦ ರಷ್ಟಿದ್ದರು. ಆದರೆ 'ಕಂದಾಯ ಕಡಿಮೆ ಮಾಡಿ ಮುಚ್ಚಳಿಕೆ ಹಣ ಹಿಂದಿರುಗಿಸಬೇಕೆಂಬ' ಚಳವಳಿಯ ಕಾಲದಲ್ಲಿ ಅನೇಕಮಂದಿ ಈ ಪಕ್ಷವನ್ನು ಬಿಟ್ಟು ಹೊರಬಂದರು. ಈಗ ಈ ಸಂಸ್ಥೆ ಅಧಿಕೃತವಾಗಿ ಚಟುವಟಿಕೆ ನಡೆಸುತ್ತಿಲ್ಲವಾದರೂ, ಗುಪ್ತವಾಗಿಯೇ ಒಳಸಂಚು ನಡೆಸುತ್ತಿದೆ. ಇದರ ಬಗ್ಗೆ ಹೆಚ್ಚು ಎಚ್ಚರಿಕೆಯಿಂದಿರಬೇಕು.

"ಈಗಿನ ಹ್ಸಿಯಾಂಗ್ ಜಿಲ್ಲಾಸರ್ಕಾರವು 'ಕಂದಾಯ ಕಡಿಮೆಮಾಡಿ' ಚಳವಳಿಯ ಕಾಲದಲ್ಲಿ ಚುನಾಯಿಸಲ್ಪಟ್ಟಿತು. ಇದರಲ್ಲಿರುವ ನಾಲ್ವರು ಸದಸ್ಯರುಗಳಲ್ಲಿ ಮೂರು ಮಂದಿ ಬಡರೈತರು. ಮತ್ತು ಒಬ್ಬ ಮಧ್ಯಮರೈತ.

"ತಾಲ್ಲೂಕಿನಲ್ಲಿ ೪೬ಮಂದಿ ಕಮ್ಯೂನಿಸ್ಟ್‌ಪಕ್ಷ ಮತ್ತು ನೂತನ ಪ್ರಜಾಸತ್ತಾತ್ಮಕ ಯುವಕ ಸಂಘದ ಸದಸ್ಯರಿದ್ದಾರೆ. ಇವರೆಲ್ಲರೂ ತುಂಬ ಪ್ರತಿಭಾವಂತರೂ, ಜನಾನುರಾಗಿಗಳೂ ಆಗಿದ್ದಾರೆ."

ವರದಿ ಮುಗಿದಮೇಲೆ, ದಳದ ಲುಯಾಂಗ್‌ನನ್ನು ಸ್ಕಲು ಹಳ್ಳಿಗೆ ಕಳುಹಿಸಲಾಯಿತು. ಅವನು ಅಧ್ಯಕ್ಷನೊಂದಿಗೆ ಅನೇಕ ಪ್ರಶ್ನೆಗಳನ್ನು ಕೇಳಿ ಕ್ಲಿಷ್ಟ ಸಮಸ್ಯೆಗಳಿಗೆ ತಕ್ಕ ಉತ್ತರಗಳನ್ನು ಪಡೆದನು.

ರಾತ್ರಿ ಊಟವಾದಮೇಲೆ ಗ್ಯಾಸ್‌ಲೈಟಿನ ಬೆಳಕಿನಲ್ಲಿ ಪುನಃ ಸಭೆ ಸೇರಿತು. ರೈತಸಂಘದ ಅಧ್ಯಕ್ಷ ಯೆನ್ ತನ್ನ ವರದಿಯನ್ನೋದಿದನು.

"ಇಲ್ಲಿನ ರೈತಸಂಘವು 'ಕಡಿಮೆ ಕಂದಾಯ'ದ ಚಳವಳಿಯ ಕಾಲದಲ್ಲಿ ಸ್ಥಾಪಿಸಲ್ಪಟ್ಟಿತು. ಆದ್ದರಿಂದ ಇದರಲ್ಲಿ ಸಾಧಾರಣವಾಗಿ ಮಧ್ಯಮವರ್ಗದ ರೈತರ ಸಂಖ್ಯೆಯೇ ಹೆಚ್ಚು. ಈ ಸಂಘಕ್ಕೆ ಮೂರು ಉಪಸಂಸ್ಥೆಗಳಿವೆ. ಒಂದೊಂದು ಉಪಸಂಸ್ಥೆಯೂ ಮೂರು ಹಳ್ಳಿಗಳ

ನ್ನೊಳಗೊಂಡಿದೆ, ಸಂಘದ ಒಟ್ಟು ಸದಸ್ಯರ ಸಂಖ್ಯೆ ೯೫೭. ಇದರಲ್ಲಿ ೫೩೪ ಮಂದಿ ಗಂಡಸರು ಮತ್ತು ೪೨೩ ಮಂದಿ ಹೆಂಗಸರಿದ್ದಾರೆ. ೧೫ ಜನರಿರುವ ಕಾರ್ಯಕಾರಿ ಮಂಡಲಿಯಲ್ಲಿ, ೮ ಜನ ಬೇಸಾಯದ ಕೂಲಿಕಾರರು ಮತ್ತು ೭ ಜನ ಮಧ್ಯಮವರ್ಗದ ರೈತರಿದ್ದಾರೆ. ನಮ್ಮ ರೈತ ಸಂಘಕ್ಕೆ ರಾಷ್ಟ್ರದ ಯೋಜನೆಯಲ್ಲಿ ಹೆಚ್ಚು ಪ್ರಾಮುಖ್ಯತೆ ಕೊಡಬೇಕು. ನಮ್ಮ ಸಂಘದ ನೆರವಿನಿಂದ ರೈತರಲ್ಲಿ ವರ್ಗಜಾಗೃತಿಯನ್ನು ಹೆಚ್ಚಿಸಿ, ಸಾಮೂಹಿಕವಾಗಿ ಕೆಲಸಮಾಡಿ ಉತ್ಪತ್ತಿ ಹೆಚ್ಚಿಸುವಂತೆ ಮಾಡಬಹುದು. ಸಭೆ ಸಮ್ಮೇಳನಗಳ ಮೂಲಕ ಒಗ್ಗಟ್ಟನ್ನು ಬಲಪಡಿಸಿ, ಸಾಮೂಹಿಕ ವ್ಯವಸಾಯವನ್ನು ಅಭಿವೃದ್ಧಿಗೊಳಿಸಿ, ಅವರ ಜ್ಞಾನವನ್ನೂ, ಜೀವನಮಟ್ಟವನ್ನೂ ಉತ್ತಮಗೊಳಿಸಬಹುದು."

"ರೈತಸಂಘವು 'ಕಡಿಮೆ ಕಂದಾಯ' ಮುಚ್ಚಳಿಕೆ ಹಣ ಹಿಂದಿರುಗಿಸುವ' ಚಳವಳಿಯನ್ನು ಜಯಪ್ರದವಾಗಿ ನಡೆಸಿದ್ದರೂ, ಭೂಸುಧಾರಣೆಯ ಕಾರ್ಯಭಾರವನ್ನು ಈಗಿರುವ ಸ್ಥಿತಿಯಲ್ಲಿ ನಿರ್ವಹಿಸಲಾರದು. ಆದ್ದರಿಂದ ಚಳವಳಿಯು ನಡೆಯುತ್ತಿರುವಾಗಲೇ, ನಾವು ಸಂಘವನ್ನು ಬೆಳೆಸಿ, ಬಲಿಷ್ಠವಾಗಿ ಕಟ್ಟಬೇಕಾಗಿದೆ. ಅದಕ್ಕಾಗಿ ಜಮೀನ್ದಾರರನ್ನು ಬೇರ್ಪಡಿಸಿ, ದ್ರೋಹಿಗಳ ಸಿಬ್ಬಂದಿಯನ್ನು ಸಂಘದಿಂದ ಹೊರದೂಡಬೇಕಾಗಿದೆ. ರಾಜಕೀಯದಲ್ಲಿ ಹಿಂದುಳಿದವರನ್ನು ವಿದ್ಯಾವಂತರನ್ನಾಗಿ ಮಾಡಿ, ಅವರಲ್ಲಿ ಹೊಸನಾಯಕರನ್ನು ಸಿದ್ಧಗೊಳಿಸಬೇಕಾಗಿದೆ."

ಮಾರನೆಯದಿನ ಮುಂಜಾನೆಯಲ್ಲೇ ಜನರು ಸಭೆಗೆ ಬರಲು ಆರಂಭಿಸಿದರು. ಅದು ಕೆಲಸದ ದಳ ಮತ್ತು ಹಳ್ಳಿಯ ವಿದ್ಯಾವಂತರು ಕೂಡಿದ ಸಭೆಯಾಗಿತ್ತು. ಚಿ-ಮಿನ್‌ನು, ರೈತರ ವಿಮೋಚನೆಯ ಕಾರ್ಯದಲ್ಲಿ ಹಳ್ಳಿಯ ವಿದ್ಯಾವಂತರ ಮತ್ತು ಬುದ್ಧಿಜೀವಿಗಳ ಕರ್ತವ್ಯವನ್ನು ವಿವರಿಸಿದನು.

ನೆರೆದಿದ್ದ ಉಪಾಧ್ಯಾಯರುಗಳೆಲ್ಲ ಒಬ್ಬರಾದಮೇಲೊಬ್ಬರು ಮಾತನಾಡಿದರು. ಅವರಲ್ಲನೇಕರು ಜಮೀನ್ದಾರಿ ಹಿನ್ನೆಲೆ ಹೊಂದಿದ್ದರೂ, ಆ ವರ್ಗ ನಿರ್ಮೂಲಕ್ಕಾಗಿ ರೈತರೊಡನೆ ಸಹಕರಿಸುವುದಾಗಿ ಭರವಸೆಯಿತ್ತರು.

ಅವರು ದೇಶದ ಹಿತದೃಷ್ಟಿಯಿಂದ ಭೂಸುಧಾರಣೆ ಎಷ್ಟು ಆಗತ್ಯವೆಂಬು ದನ್ನು ಮನಗಂಡಿದ್ದರು. ಸುಧಾರಣಾ ದಳದವರಿಗೆ ನೆರವು ನೀಡಲು ನಾನಾರೀತಿಯ ಕಾರ್ಯಕ್ರಮಗಳನ್ನು ವಿವರಿಸಿದರು. ಕಪ್ಪು ಹಲಗೆಯ ಮೇಲೆ ವರ್ತಮಾನ ಬರೆಯುವುದು, ಪ್ರಚಾರೋಪನ್ಯಾಸಗಳನ್ನು ಮಾಡು ವುದು, ಸಾಮಾಜಿಕ ನಾಟಕಗಳನ್ನಾಡಿ ರೈತರ ಪರಿಜ್ಞಾನ ಹೆಚ್ಚುವಂತೆ ಮಾಡುವುದು, ಭೂಸುಧಾರಣಾ ಕಾನೂನು ಮತ್ತು ರೈತವರ್ಗದ ಜೀವನ ಉತ್ತಮಸ್ಥಿತಿಗೆ ಬರುವಂತೆ ಮಾಡುವ ಉದ್ದೇಶದಿಂದ ಸರ್ಕಾರ ಮಾಡಿರುವ ಕಾಯಿದೆಗಳನ್ನು ಅಭ್ಯಸಿಸಿ, ರಾತ್ರಿಶಾಲೆಗಳಲ್ಲಿ ಅವುಗಳನ್ನು ರೈತರಿಗೆ ತಿಳಿಯಹೇಳುವುದು, ರೈತರಲ್ಲಿರುವ ವಿವಿಧ ದರ್ಜೆಗಳನ್ನು ವಿವರಿಸುವುದು, ದೊಡ್ಡ ಭಿತ್ತಿಪತ್ರಗಳನ್ನು ತಯಾರಿಸಿ ಆಕರ್ಷಕ ಚಿತ್ರಗಳ ಮೂಲಕ ಜಮೀನ್ದಾರರ ದಬ್ಬಾಳಿಕೆಯನ್ನು ಬಹಿರಂಗಪಡಿಸುವುದು, ಹೀಗೆ ನಾನಾ ರೀತಿಯಲ್ಲಿ ಸಹಾಯಮಾಡಲು ಒಪ್ಪಿಕೊಂಡರು.

ಲು-ಯಾಂಗ್‌ನು ಎಲ್ಲವನ್ನೂ ಸಾವಧಾನದಿಂದ ಕೇಳಿ ತನ್ನ ಟಿಪ್ಪಣಿ ಪುಸ್ತಕದಲ್ಲಿ ಬರೆದುಕೊಂಡನು. ಗ್ರಾಮಾಧಿಕಾರಿಯ ಮಾತುಗಳು ಅವನಿಗೆ ತುಂಬ ಸಹಕಾರಿಯಾಗಿಯೂ, ಮಹತ್ವಪೂರ್ಣವಾಗಿಯೂ ಕಂಡುಬಂದವು ತನ್ನ ಪುಸ್ತಕದಲ್ಲಿ ಹಳ್ಳಿಯ ಜನರನ್ನು ವರ್ಗಕ್ಕನುಗುಣವಾಗಿ ವಿಂಗಡಿಸಿ ದನು. ಹೀಗೆ ಮಾಡುವಾಗ, ಪ್ರಾಂತೀಯ ಕಮ್ಯೂನಿಸ್ಟ್ ಪಾರ್ಟಿಯ ಕಾರ್ಯದರ್ಶಿಯ ಮಾತು ಜ್ಞಾಪಕಕ್ಕೆ ಬರುತ್ತಿತ್ತು.

**"ದೀನರಲ್ಲಿ, ಕಡುಬಡವರಲ್ಲಿ, ಅತ್ಯಂತ ಕೆಳಕ್ಕೆ ತುಳಿಯಲ್ಪಟ್ಟವರಲ್ಲಿ, ಮತ್ತು ಹೆಚ್ಚು ದುಡಿತಕ್ಕೆ ಒಳಗಾಗಿರುವವರಲ್ಲಿ, ಕಾರ್ಯಕರ್ತರು ಗಳಿಗಾಗಿ ಹುಡುಕು ; ಜಮೀನ್ದಾರರ ಬಗ್ಗೆ ಸದಾ ಎಚ್ಚರಿಕೆ ಯಿಂದಿರು"**

ರೈತರಲ್ಲಿ ಜಾಗೃತಿಯನ್ನುಂಟುಮಾಡದ ಹೊರತು ಜಮೀನ್ದಾರರ ಬಗ್ಗೆ ಎಚ್ಚರಿಕೆಯಿಂದಿರುವುದು ಸಾಧ್ಯವಿಲ್ಲವೆಂದು ಅವನಿಗೆ ಮನದಟ್ಟಾ ಗಿತ್ತು.



# ಶೋಕದಿಂದ ಶಕ್ತಿ

ಯಾವಾಗಲೂ ಗಲಿಬಿಲಿಯಿಂದ ಇರುತ್ತಿದ್ದ ಅವರ ಮನೆ ಪೆಂಗ್-ಎರು ತಪ್ಪಿಸಿಕೊಂಡು ಹೋದ ಮೇಲೆ ಮತ್ತು ಅವನಣ್ಣ ಪೆಂಗ್-ಟೆಂಗನ ದಸ್ತಗಿರಿ ಯಾದ ಮೇಲೆ ಪಾಳುಬಿದ್ದ ಗುಡಿಯಂತೆ ಹಾಳು ಸುರಿಯುತ್ತಿತ್ತು. ತಾಲ್ಲೂಕು ಸರ್ಕಾರದವರು ೨೦ಕ್ಕೂ ಹೆಚ್ಚಾಗಿದ್ದ ಕೊಠಡಿಗಳಿಗೆಲ್ಲಾ ಬೀಗ ಮುದ್ರೆ ಹಾಕಿದರು. ಆಯುಧಗಳಿದ್ದ ಕೊಠಡಿಯನ್ನು ಭದ್ರವಾಗಿ ಮುಚ್ಚಿ ಮೊಹರು ಮಾಡಿದರು. ಪೆಂಗ್-ಎರುವಿನ ಹೆಂಡತಿ ಕಣ್ಣುಮುಚ್ಚಿ ಬೌದ್ಧ ಸೂತ್ರಗಳನ್ನು ಹಾಡುತ್ತಾ 'ಮರದ ಮೀನ'ನ್ನು [ಬೌದ್ಧರು ಜಪ ಮಾಡು ವಾಗ ಉಪಯೋಗಿಸುವ ಮೀನಿನಾಕಾರದ ನಗಾರಿ] ಬೇಜಾರು ಬರು ವಂತೆ ಬಡಿಯುವ ಸದ್ದು ಸದಾ ಕೇಳಿಬರುತ್ತಿತ್ತು. ಈ ವಾತಾವರಣದಲ್ಲಿ ಕೆಲಸಮಾಡಿಕೊಂಡು ಓಡಾಡುತ್ತಿದ್ದ ಸೇವಕಿಗೆ ತಾನು ಶವದ ಪೆಟ್ಟಿಗೆಯಲ್ಲಿ ಓಡಾಡುತ್ತಿದ್ದೇನೋ ಎಂದು ಭಾಸವಾಗುತ್ತಿತ್ತು. ಫು-ಚುವಾನನಿಗಂತೂ ತನ್ನ ಸರ್ವಸ್ವವನ್ನೂ ಕಳೆದುಕೊಂಡಂತಾಗಿತ್ತು. ಒಡೆಯನ ಅಪ್ಪಣೆಗಳಿಲ್ಲ ವಾಯಿತಲ್ಲ ಎಂದು ಪರಿತಪಿಸಿದನು.

ಹೊರಗಡೆ ಎಲ್ಲರೂ ಸಂತೋಷದಿಂದ ಕೂಗಾಡುತ್ತಿದ್ದಾಗ 'ಈ ಶವದ ಪೆಟ್ಟಿಗೆ'ಯಲ್ಲಿ ಫು-ಚುವಾನ್ ಮತ್ತು ಸೇವಕಿಹುಡುಗಿಯು, ತಮ್ಮದೇ ಆದ ಸಮಸ್ಯೆಗಳೊಂದಿಗೆ ಪೇಚಾಡುತ್ತಿದ್ದರು. ಹೆಂಡತಿಯನ್ನು ಬಿಟ್ಟು ಹೋದ ಪೆಂಗ್‌ದೊರೆ ಎಂತಹ ಕಲ್ಲೆದೆಯ ಕ್ರೂರಿ ಎಂಬ ಯೋಚನೆ ಸೇವಕಿ ಗಾದರೆ, ತನ್ನಲ್ಲಿದ್ದ ಒಂದು ಚಿಕ್ಕ ಹೊಲವನ್ನೂ ಭೂಸುಧಾರಣೆಯಾಗು ವಾಗ ಎಲ್ಲಿ ಕಸಿದುಕೊಳ್ಳುವರೋ ಎಂಬ ಯೋಚನೆ ಫು-ಚುವಾನನನ್ನು ಕಾಡಿಸುತ್ತಿತ್ತು.

ನವೆಂಬರ್ ೨೬ನೇ ತಾರೀಖು ಸಾಯಂಕಾಲ ಫು-ಚುವಾನನು ಪಿಪಾಯಿ ತುಂಬ ನೀರನ್ನು ತುಂಬಿ ಮನೆಗೆ ಹಿಂದಿರುಗಿದಾಗ, ಅಲ್ಲಿ ಭೂ ಸುಧಾರಣಾ ದಳದ ಲು-ಯಾಂಗ್‌ನು ತನಗಾಗಿ ಕಾದಿರುವುದನ್ನು ಕಂಡನು.

'ಓಹ್, ಯಾರೋ ಸಮವಸ್ತ್ರಧಾರಿ'-ದಸ್ತಗಿರಿ ಮಾಡಲು ಬಂದಿರಬಹುದೆ?' ಎಂಬ ಯೋಚನೆ ಅವನ ಮನಸ್ಸಿನಲ್ಲಿ ತಟ್ಟನೆ ಸುಳಿದುಹೋಯಿತು.

"ಎಷ್ಟುಸಲ ನೀರನ್ನು ತಂದೆ, ಫು-ಚುವಾನ್?" ಎಂದು ನಸುನಗುತ್ತಾ ಚಿರಪರಿಚಿತಸ್ನೇಹಿತನೊಂದಿಗೆ ಮಾತಾಡುವಂತೆ ವಿಶ್ವಾಸಪೂರ್ವಕವಾಗಿ, ಲು-ಯಾಂಗ್ ಕೇಳಿದ. ಫು-ಚುವಾನನಿಗೆ ಸ್ವಲ್ಪ ಸಮಾಧಾನವಾದಂತೆ ಕಂಡುಬಂದರೂ, ಇನ್ನೂ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು.

"ಇತ್ತೀಚೆಗೆ ಮನೆಯಲ್ಲಿ ನಾವು ಮೂವರೇ ಆದ್ದರಿಂದ ೪-೫ ಬಾರಿ ತಂದರೆ ನಾಕಾಗುತ್ತೆ" ಎಂದು ಅಡ್ಡೆಯಿಂದ ಬಿಂದಿಗೆಗಳನ್ನು ಬಿಡಿಸುತ್ತಾ ಹೇಳಿದ.

"ನೀರಿಗೆ ಎಷ್ಟುದೂರ ಹೋಗಬೇಕು?" ಎಂದು ಅಡ್ಡೆಯನ್ನು ಗೋಡೆಗೆ ಒರಗಿಸಿಡುವುದರಲ್ಲಿ ಫು-ಚುವಾನನಿಗೆ ಸಹಾಯ ಮಾಡುತ್ತಾ, ಲು-ಯಾಂಗ್ ಕೇಳಿದನು.

"ಇಲ್ಲೀ ಆಚೆ ನದಿಯ ಅಣೆಕಟ್ಟೆದೆಯಲ್ಲ, ಅಲ್ಲಿಂದ ತರಬೇಕು" ಇಷ್ಟುಹೊತ್ತಿಗೆ ಫು-ಚುವಾನನಿಗೆ ಸ್ವಲ್ಪ ಧೈರ್ಯ ಬಂತು. ತಲೆಯೆತ್ತಿ, ಲು-ಯಾಂಗ್‌ನನ್ನು ಮೇಲಿಂದ ಕೆಳಗೆ ನೋಡಿದನು.

"ಇಲ್ಲೀ" ಲು-ಯಾಂಗ್‌ನಿಗೆ ಆಶ್ಚರ್ಯವಾಯಿತು.

"ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಎಷ್ಟು ಅಡ್ಡೆ ನೀರು ಹೊರುತ್ತಿದ್ದೆ?"

"ಬಿಡುಗಡೆಗೆ ಮೊದಲು ಮನೆಯಲ್ಲಿ ೪ ಜನ ಹೊಲಗೆಲಸದವರಿದ್ದರು; ಒಬ್ಬ ಗುಮಾಸ್ತ, ಒಬ್ಬ ಅಡಿಗೆಯವ, ಇದರಮೇಲೆ ಹೋಗಿಬರುವ ನೆಂಟರಿಷ್ಟರು, ಕರ್ನಲ್‌ಗಳು, ಕ್ಯಾಪ್ಟನ್‌ಗಳು-ಏನಿಲ್ಲೆಂದರೂ ದಿನಕ್ಕೆ ಹತ್ತು ಜನಕ್ಕೆ ಕಮ್ಮಿ ಇರುತ್ತಿರಲಿಲ್ಲ. ಊಟದ ತಟ್ಟೆಗಳನ್ನು ತೊಳೆಯುವುದಕ್ಕೇ ಬೇಕಾದಷ್ಟು ನೀರು ಖರ್ಚಾಗುತ್ತಿತ್ತು."

"ಓಹ್, ಅದು ತುಂಬ ಕಷ್ಟದ ಕಾಲವಾಗಿತ್ತು. ಒಂದೊಂದು ಬಾರಿಯೂ ಎರಡು ಕೊಡಗಳಂತೆ, ಏಳೆಂಟು ಬಾರಿ ಅಡ್ಡೆ ಹೊರಬೇಕಾ

ಗಿತ್ತು"ಎಂದು ನಿಟ್ಟುಸಿರು ಬಿಡುತ್ತಾ, ಒಲೆಯಮೇಲೆ ಸ್ವಲ್ಪ ನೀರನ್ನು ಕಾಯಲಿಕ್ಕಿಟ್ಟು, ಸೌದೆಯನ್ನು ಕೂಡಿಸತೊಡಗಿದ.

"೭-೮ ಸಲ! ಒಂದು ಸಲಕ್ಕೆ ೩ಲೀ! ಒಟ್ಟು ೨೦ಲೀಗೂ ಹೆಚ್ಚು ದೂರ ಬರೀ ನೀರು ತರುತ್ತಲೇ ಸುತ್ತಬೇಕಿತ್ತೆ ? ಇದರ ಜೊತೆಗೆ ಬೇರೆ ಕೆಲಸಗಳೂ ಇದ್ದವೋ ?"

" ಓ, ಬೇಕಾದಷ್ಟು ! ಈಗ ಇರುವ ಹಾಗಿದ್ದಿದ್ದರೆ! ಆಗ ಹಂದಿ ಮೇಯಿಸುವುದು, ದನಕಾಯುವುದು ಸೀಮೆನಾಯಿ ಸಾಕುವುದು ಇವುಗಳ ಜೊತೆಗೆ ಗೊಬ್ಬರ ಚೆಲ್ಲಿ ಸ್ವಲ್ಪ ಭಾಗ ಹೊಲವನ್ನೂ ಉಳಬೇಕಾಗಿತ್ತು."

" ನೀನು ಎಷ್ಟು ಹೊಲವನ್ನು ಉಳಬೇಕಾಗಿತ್ತು ?"

ಫು-ಚುವಾನನು ಬೆಂಕಿಯನ್ನೇ ದಿಟ್ಟಿಸಿ ನೋಡುತ್ತಾ, ಲೆಕ್ಕಹಾಕಿ, "ಒಂದು ಟಾನ್, ಎಂಟು ಮೌ ಹೊಲವನ್ನು ಉಳಬೇಕಿತ್ತು " ಎಂದನು. ಹೊಲದ ಕೆಲಸ ಗೊತ್ತಿಲ್ಲದ ಲು-ಯಾಂಗ್‌ನಿಗೆ ಅಷ್ಟು ಹೊಲವನ್ನೂ ಫು-ಚುವಾನ್ ಒಬ್ಬನೇ ಉತ್ತು, ಗೊಬ್ಬರ ಹಾಕಿ ಬಿತ್ತಿ, ಬೆಳೆ ಮಾಡುತ್ತಿದ್ದುದನ್ನು ಕೇಳಿ ಆಶ್ಚರ್ಯವಾಯಿತು. ಇದರ ಜೊತೆಗೆ ಮೂಳೆಬಿಟ್ಟುಕೊಂಡಿದ್ದ ಫು-ಚುವಾನನ್ನು ನೋಡಿ ಕನಿಕರವೂ ಹುಟ್ಟಿತು.

ಬೆರಳುಗಳನ್ನು ಮಡಿಸಿ ಎಣಿಸುತ್ತಾ " ಅಂದರೆ ಸುಮಾರು ೭೦ ಪಿಕಲ್‌ಗಳಷ್ಟು ಬೆಳೆ ಬರುತ್ತಿತ್ತಲ್ಲವೇ ?" ಎಂದನು.

" ಮಳೆ ನಾಕಷ್ಟು ಆದ ವರ್ಷ ೩೦ ಪಿಕಲ್ ಅಷ್ಟು ದೊರೆತರೆ ಅದು ನಮ್ಮ ಅದೃಷ್ಟವೇ ಸರಿ." ಎಂದು ಬೇಸಿನ್ ಒಂದರಲ್ಲಿ ತನ್ನ ಕಾಲುಗಳನ್ನು ಬಿಸಿನೀರಿನಲ್ಲಿ ತೊಳೆಯುತ್ತಾ ಫು-ಚುವಾನ್ ಹೇಳಿದ.

" ಪೆಂಗ್-ಎರು ಅದರಲ್ಲಿ ನಿನಗೆಷ್ಟು ಕೊಡುತ್ತಿದ್ದ ?"

" ವರ್ಷಕ್ಕೆ ತಕ್ಕಂತೆ.—ಒಂದು ವರ್ಷ ೧೦, ಒಂದು ವರ್ಷ ೭-೮ ಪಿಕಲ್‌ಗಳು."

" ಹತ್ತೇ ಪಿಕಲ್‌ಗಳೇ ? ನಿಮ್ಮಿಂದ ಭೂಗಂದಾಯ ವಸೂಲ್ಮಾಡುವಾಗಲೂ ಒಳ್ಳೆಯ ಅಥವಾ ಕೆಟ್ಟ ವರ್ಷಕ್ಕೆ ತಕ್ಕಂತೆ ಹೆಚ್ಚು ಕಮ್ಮಿ ಮಾಡುತ್ತಿದ್ದನೋ ?" ಎಂದು ವ್ಯಂಗ್ಯ ಬೆರೆತ ಧ್ವನಿಯಲ್ಲಿ ಕೇಳಿದ.

ಈ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ಪ್ರು-ಚುವಾನನಿಗೆ ಗೊತ್ತಾಗಲಿಲ್ಲ.



"ಜಮೀನ್ದಾರನು ನಿನ್ನನ್ನು ಅನೇಕ ವರ್ಷಗಳಿಂದ ಸುಲಿಗೆ ಮಾಡುತ್ತಿದ್ದಾನೆ."

" ಎಷ್ಟು ವರ್ಷಗಳಿಂದ ನೀನು ಈ ಮನೆಯಲ್ಲಿ ಕೆಲಸಕ್ಕಿದ್ದೀಯ ?" ಲು-ಯಾಂಗ್ ಕೇಳಿದ.

ಫು-ಚುವಾನನಿಗೆ ತನ್ನ ಆರನೇ ವಯಸ್ಸಿನಲ್ಲಿ ದನಕಾಯುವುದಕ್ಕೆ ಸೇರಿದಾಗಿನಿಂದ ಪಟ್ಟ ಕಷ್ಟಗಳೆಲ್ಲಾ ಒಂದೊಂದಾಗಿ ಜ್ಞಾಪಕಕ್ಕೆ ಬಂದವು. " ಹದಿನಾಲ್ಕನೆಯ ವಯಸ್ಸಿನಲ್ಲಿ ನನ್ನ ತಂದೆ ತೀರಿಹೋದರು. ಅಂದಿನಿಂದ ಹೊಲಗೆಲಸ ಮಾಡುತ್ತಿದ್ದೇನೆ. ಈಗ ನನಗೆ ೨೪ ವರ್ಷ."

"೨೪ವರ್ಷ ! ಹಾಗಾದರೆ ನೀನು ಮದುವೆಯಾಗಬೇಕು !"

" ನನಗೇ ತಿನ್ನುವುದಕ್ಕಿಲ್ಲ. ಇನ್ನು ಅವಳನ್ನು ಹೇಗೆ ಸಾಕಲಿ."

" ಹೇಗೆ ನೀನು ನೀರು ಹೊರಬಲ್ಲೆ, ದನ ಕಾಯಬಲ್ಲೆ, ಹೊಲ ಉಳ ಬಲ್ಲೆ, ಆದರೂ ಹೆಂಡತಿಯನ್ನು ಹೇಗೆ ಸಾಕಲಿ ಎನ್ನುವೆಯಲ್ಲ."

"ಏನಾದರೇನು ನನಗೆ ಬೇರಾವ ಕೌಶಲ್ಯತೆಯೂ ಇಲ್ಲ, ಆದ್ದರಿಂದ ಅದೃಷ್ಟವೂ ಇಲ್ಲ. ಪೆಂಗ್‌ಬುದ್ಧಿಯವರನ್ನು ನೋಡಿ ಅವರಿಗೆ ಓದು-ಬರೆ ಯುವುದೂ ಲೆಕ್ಕ ಮಾಡುವುದೂ ಬರುತ್ತಿದ್ದವು. ಆದ್ದರಿಂದ ಮನೆಯೊಳಗೇ ಕುಳಿತುಕೊಂಡು ಸುಖವಾಗಿ ತಿಂದುಕೊಂಡಿರಬಹುದಾಗಿತ್ತು.

ತಮ್ಮ , ನೀನು ಶುದ್ಧ ತಿಳಿಗೇಡಿಯೇ ಸರಿ. ಅವನು ಸುಖ ವಾಗಿದ್ದುದು ಅವನ ವಿಶೇಷಕೌಶಲ್ಯದಿಂದಾಗಲೀ ಅಥವಾ 'ಅದೃಷ್ಟ' ದಿಂದಾಗಲಿ ಅಲ್ಲ. ಭೂಸ್ವಾಮ್ಯ ಮತ್ತು ಜಮೀನ್ದಾರರಿಗಿರುತ್ತಿದ್ದ ದರ್ಪ, ಅವನನ್ನು ಸುಖವಾಗಿರಿಸಿದ್ದವು. ಅವನು ನಿನ್ನನ್ನು ವಂಚಿಸು ತ್ತಿದ್ದಾನೆಂದು ನಿನಗಿನ್ನೂ ಅರಿವಾಗಿಲ್ಲವೇ ?''

"ವಂಚನೆ" ಫು-ಚುವಾನನಿಗೆ ಆ ಪದ ಕೇಳಿ ದಂಗುಬಡಿದಂತಾ ಯಿತು.

"ಹೌದು ವಂಚನೆಯಷ್ಟೇ ಅಲ್ಲ. ಅದೊಂದು ಹಗಲುದರೋಡೆ ಮತ್ತು ಜೇಬುಗಳ್ಳತನ." ಎಂದು ಅಭಿನಯಮಾಡಿ ತೋರಿಸುತ್ತಾ ಲು-ಯಾಂಗ್ ವಿವರಿಸಿದ :

'' ಈಗ ನೋಡು. ನೀನು ೭೦ ಪಿಕಲ್‌ಗಳಷ್ಟು ಬೆಳೆ ಬೆಳೆದರೆ, ಅವನು ನಿನಗೆ ಕೊಟ್ಟುದು ಕೇವಲ ೧೦ ಪಿಕಲ್. ಅಂದರೆ, ಪ್ರತಿವರ್ಷವೂ

ನಿನ್ನಿಂದ ಅವನು ೬೦ ಪಿಕಲ್‌ಗಳಷ್ಟು ಸೂರೆ ಮಾಡಿದ್ದಾನೆ. ಒಟ್ಟು ಲೆಕ್ಕ ಹಾಕುವುದಾದರೆ ನೀನು ಕೆಲಸ ಮಾಡಿದ ೧೮ ವರ್ಷಗಳಲ್ಲಿ ೧೦೮೦ ಪಿಕಲ್‌ಗಳಷ್ಟು ಬೆಳೆಯನ್ನು ನಿನ್ನಿಂದ ದೋಚಿಕೊಂಡಿದ್ದಾನೆ.''

"ಆದರೆ ಭೂಮಿ ಅವನದಲ್ಲವೇ?'' ಫು-ಚುವಾನ್ ಮೇಲುದನಿಯಲ್ಲಿ ನುಡಿದ

"ಹಾಗೇನು ! ಹೇಳು ಅವನಿಗೆ ಭೂಮಿ ಹೇಗೆ ಬಂತು ?''

" ಅದು ಅವರ ತಾತ ಬಿಟ್ಟುಹೋಗಿದ್ದು. ಅಣ್ಣತಮ್ಮಂದಿರಿಬ್ಬರೂ ಭಾಗ ಮಾಡಿಕೊಂಡರು.'' ಫು-ಚುವಾನನು ಪೆಂಗ್‌ದೊರೆಯ ಪರ ಮಾತನಾಡಲೆತ್ನಿಸುತ್ತಿದ್ದರೂ ಪೆಂಗ್-ಎರುವು ತನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲವೆಂಬ ಭಾವನೆಯನ್ನು ಪೂರ್ತಿಯಾಗಿ ಮರೆತಿರಲಿಲ್ಲ.

" ಅವರ ತಾತನಿಗೆ ಆ ಭೂಮಿ ಹೇಗೆ ಬಂತು ?''—ವಾಗ್ವಾದ ಬಿರುಸಾದಂತೆ ಕಂಡುಬಂತು.

"ಅವನ ತಾತ ಮಂಚುರಾಜ್ಯಭಾರದಲ್ಲಿ ನ್ಯಾಯಾಧೀಶನಾಗಿದ್ದ.'' (೧೯೧೧ರ ಕ್ರಾಂತಿಗೆ ಮುಂಚೆ ರಾಜ್ಯವಾಳುತ್ತಿದ್ದ ರಾಜಮನೆತನ. ನಿರಂಕುಶ ರಾಜಪ್ರಭುತ್ವವಿತ್ತು.)

" ಈಗ ಸರಿ ನೀನು ಹೇಳುತ್ತಿರುವುದು. ಆಗ ನ್ಯಾಯಾಧೀಶನಿಗೆ ಬೇಕಾಗಿದ್ದುದೆಲ್ಲ—ಹಣ, ಹಣ. ಪೆಂಗ್-ಏರುವಿನ ತಾತ ನಿನ್ನ ತಾತನನ್ನು ವಂಚಿಸಿ ಹಣ ಕಸಿದುಕೊಂಡು ಭೂಮಿಯನ್ನು ಕೊಂಡುಕೊಂಡ. ಈಗ ಪೆಂಗ್-ಏರು ಆ ಭೂಮಿಯ ಮೂಲಕ ನಿನ್ನನ್ನು ಸುಲಿಗೆ ಮಾಡುತ್ತಿದ್ದಾನೆ."

ಫು-ಚುವಾನನಿಗೆ ಮಾತೇ ಹೊರಡದಾಯಿತು. ಗೋಡೆಗೆ ಒರಗಿಕೊಂಡು ಬಹಳ ಹೊತ್ತಿನತನಕ ಯೋಚಿಸುತ್ತಾ ಕುಳಿತ.

ಆ ಸಂಜೆ ಲು-ಯಾಂಗ್ ಅಲ್ಲಿಯೇ ಉಳಿದ. ಇಬ್ಬರೂ ಅಕ್ಕಪಕ್ಕದ ಹಾಸಿಗೆಯಲ್ಲಿ ಮಲಗಿಕೊಂಡು ಬಹಳ ಹೊತ್ತಿನವರೆಗೆ ಮನಃಪೂರ್ತಿಯಾಗಿ ಮಾತನಾಡಿದರು.

ಲು-ಯಾಂಗನು ಫು-ಚುವಾನನಿಗೆ ಅಣ್ಣಸಿಗಿಂತಲೂ ಹೆಚ್ಚಾದನು. ಫು-ಚುವಾನ್, ಬಾಲ್ಯದಿಂದಲೂ ತಾನು ಪಟ್ಟ ಕಷ್ಟಗಳನ್ನೆಲ್ಲಾ

ಲುಯಾಂಗ್‌ನ ಮುಂವೆ ತೋಡಿಕೊಂಡನು. ಅವನು ೬ ವರ್ಷದ ಹುಡುಗನಾಗಿದ್ದಾಗ, ಪಂಗ್-ಎರುವಿನ ಹೆಂಡತಿ, ಏಳು ತಿಂಗಳ ಗರ್ಭಿಣಿಯಾಗಿದ್ದ ಅವನ ತಾಯಿಯನ್ನು ಅಟ್ಟಕ್ಕೆ ಹತ್ತಿ ಸೌದೆಯನ್ನು ತರಲು ಆಜ್ಞಾಪಿಸಿದಳು. ತಾಯಿಯು ಏಣಿಹತ್ತುವಾಗ ಕಾಲುಜಾರಿ ಕೆಳಗೆ ಬಿದ್ದುಬಿಟ್ಟಳು. ವ್ಯೆ ಇಳಿದು, ಎರಡು ದಿನಗಳು ನರಳಿದ ಮೇಲೆ ತೀರಿಹೋದಳು. ಅವನ ತಂದೆಯೂ, ಒಮ್ಮೆ ಪೆಂಗ್-ಎರುವಿಗಾಗಿ ದವಸ ತರಲು ಹೋಗಿದ್ದಾಗ, ಜಪಾನೀಯರ ಕೈಗೆ ಸಿಕ್ಕಿಬಿದ್ದನು. ಅವರು ಆತನ ಬಳಿ ಇದ್ದ ದವಸವನ್ನು ಕಿತ್ತುಕೊಂಡು, ಏರಿಯ ಬಳಿ ಕೊಂದುಹಾಕಿದರು. ಹೀಗೇ ತನ್ನ ಕಾರ್ಪಣ್ಯಗಳನ್ನೆಲ್ಲಾ ಹೇಳಿಕೊಳ್ಳುತ್ತಾ, ಫು-ಚುವಾನ್, ತನ್ನ ಮನಸ್ಸಿನಲ್ಲಿ ಬಹಳ ಕಾಲದಿಂದ ಹುದುಗಿದ್ದ ಪ್ರಶ್ನೆಯನ್ನು ಕೇಳಿದ: "ಜಮೀನ್ದಾರರು ಹೊಲಗೆಲಸದವರಿಗೆ ಬಳುವಳಿಯಾಗಿ ಕೊಟ್ಟಿರುವ ಭೂಮಿಯನ್ನೂ ಭೂಸುಧಾರಣೆಯಾದಾಗ ಭಾಗಮಾಡುವರೇ ?"

"ನಿನಗೆ ಭೂಮಿಯನ್ನು ಪೆಂಗ್-ಎರು ಕೊಟ್ಟನೆಂದು ಯಾಕೆ ಹೇಳುತ್ತೀಯ ?"

"ಹೌದು. ಅವನೇ ನನಗೆ ೫ ಟೌ ೭ ಪೆಂಗ್ ಭೂಮಿಯನ್ನು ಕೊಟ್ಟಿದ್ದು" ಎಂದು ಫು-ಚುವಾನ್ ಪ್ರಾಮಾಣಿಕತೆಯಿಂದ ನುಡಿದ.

"ಈಗ ನೋಡು. ನಿನ್ನ ಈ ದಿಂಬನ್ನು ನಾನು ಬಲಾತ್ಕಾರದಿಂದ ಕಸಿದುಕೊಂಡು, ನೀನು ಅಪೇಕ್ಷಿಸಿದಾಗ ದಿಂಬಿನ ಬದಲು ಅದರಲ್ಲಿರುವ ಒಂದು ಹಿಡಿ ಹತ್ತಿಯನ್ನು ಕೊಟ್ಟರೆ ಒಪ್ಪುತ್ತೀಯಾ ?"

"ಎಂದಿಗೂ ಇಲ್ಲ"—ಹೀಗೆಂದು ಹೇಳುವಾಗ ಫು-ಚುವಾನನಿಗೆ ಯಾವುದೋ ಕಾಗದಕ್ಕೆ ಪೆಂಗ್-ಎರುವು ರುಜು ಮಾಡಿಸಿಕೊಂಡ ವಿಷಯ ಜ್ಞಾಪಕಕ್ಕೆ ಬಂತು,

"ಆದ್ದರಿಂದ," ಲು-ಯಾಂಗ್ ಮುಂದುವರೆಸಿದ, "ಭೂಮಿಯ ಮೇಲೆ ಪೆಂಗ್-ಎರುವಿನ ಒಡೆತನ ಎಂದಿಗೋ ಮುಗಿದುಹೋಯಿತು. ಯಾರು ಉಳುವವರೋ ಅವರಿಗೇ ಆ ಹೊಲ ಸೇರಿದ್ದು. ಭೂಸು-

ಧಾರಣೆ ಎಂದರೆ ಏನಂತ ತಿಳಿದಿದ್ದಿ ? ಉಳುವ ರೈತರಿಗೆ ಅವರಿಗೆ ಸೇರಿದ್ದ ಹೊಲವನ್ನು ಅವರಿಗೇ ಹಿಂದಿರುಗಿಸುವುದೇ ಭೂಸುಧಾರಣೆ. ನಿನ್ನಂತಹ ಕಡುಬಡವರಾದ ಶ್ರಮಪಡುವವರಿಗಲ್ಲದೆ ಮತ್ತಿನ್ನಾರಿಗೆ ಭೂಮಿ ಕೊಡುವುದು ?

ನಿನ್ನದಾದ ೫ ಟೌ ೭ ಷೆಂಗ್ ಭೂಮಿ ನಿನಗೇ ದೊರಕುತ್ತದೆ.''

ಈ ಮಾತನ್ನು ಕೇಳಿದ ಕೂಡಲೇ ಫು-ಚುವಾನ್ ಎದ್ದು ಕುಳಿತ.

"ಅಯ್ಯೋ, ಆ ಪೆಂಗ್-ಎರು ಘಾತುಕನು ನನಗೆ ಮೋಸಮಾಡಿ ಹೋಗಿದ್ದಾನೆ. ನಾನು ಅವನಲ್ಲಿಗೆ ಹೋಗಿ ಅದನ್ನು ಹಿಂತಿರುಗಿ ತರಬೇಕು" ಎಂದು ತನ್ನ ಯಜಮಾನನನ್ನು ಶಪಿಸುತ್ತಾ, ಅಳತೊಡಗಿದನು. ಪೆಂಗ್-ಎರು ಓಡಿಹೋಗಿದ್ದನೆಂಬುದನ್ನೂ ಮರೆತು, ಅವನ ಮನೆಯ ಕಡೆ ಹೊರಡಲು ಅಣಿಯಾದ.

''ಏನು, ಹಿಂದಕ್ಕೆ ತರಬೇಕಾದದ್ದು ?''

''ಒಂದು ಕಾಗದ. ನನ್ನಿಂದ ಅವನಿಗೆ ಏನೂ ಬಾಕಿ ಇಲ್ಲವೆಂದೂ, ಮತ್ತು ನನಗೆ ಕೊಟ್ಟ ಜಮೀನನ್ನು, ಚಿಯಾಂಗ್-ಕೈ-ಷೇಕನು ಹಿಂತಿರುಗಿ ಬಂದ ಮೇಲೆ ಅವನಿಗೇ ವಾಪಸು ಮಾಡಬೇಕೆಂದೂ, ಒಂದು ಕಾಗದದಲ್ಲಿ ಬರೆದು ನನ್ನ ಹೆಬ್ಬೆಟ್ಟಿನ ರುಜುವನ್ನು ಹಾಕಿಸಿಕೊಂಡನು"ಎಂದು ಬಹಳ ದಿನಗಳಿಂದ ಯಾರಿಗೂ ಹೇಳದಿದ್ದ ಒಂದು ರಹಸ್ಯ ಸುದ್ದಿಯನ್ನು ಹೊರಗೆಡಹಿದ.

ಜಮೀನ್ದಾರನ ಕುಹಕತನಕ್ಕೆ ಲು-ಯಾಂಗ್‌ನೂ ಬೆಚ್ಚಿದನು. "ಪಾಪಿ ಪೆಂಗ್‌ಎರು! ಎಂತಹ ದ್ರೋಹಿ ಅವನು. ಹೋಗಲಿ, ನೀನು ಚಿಂತಿಸಬೇಡ. ಚಿಯಾಂಗ್-ಕೈ-ಷೇಕ್ ಎಂದೆಂದಿಗೂ ಹಿಂದಿರುಗಿ ಬರಲಾರ. ಆದರೂ, ನೋಡು, ಜಮೀನ್ದಾರರ ಹೃದಯ ಎಂತಹ ನೀಚಜಾತಿಯದು." ಎಂದು ಸಂತೈಸಿದನು.

ಫು-ಚುವಾನನಿಗೆ ಜ್ಞಾನೋದಯವಾಯಿತು. ಮಾರನೆಯ ದಿನ ಬೆಳಿಗ್ಗೆ ಸೇವಕಿ ಯು-ಲಿಯನ್‌ಳು ಅಡಿಗೆ ಮನೆಗೆ ಬಂದಾಗ, ಅವಳಿಗೆ

ಹಿಂದಿನ ರಾತ್ರಿ ನಡೆದ ಸಂಭಾಷಣೆ ಎಲ್ಲವನ್ನೂ ತಿಳಿಸಿದನು. ರಾತ್ರಿ ಊಟ ಮುಗಿದಮೇಲೆ ಇಬ್ಬರೂ ಸೀ-ವುನ ಮನೆಗೆ ಹೋಗಬೇಕೆಂದು ನಿರ್ಧರಿಸಿ ಕೊಂಡರು.

ಆ ದಿನ ಸಾಯಂಕಾಲ ಸೀ-ವುನ ಮನೆಯಲ್ಲಿ, ಲೀ ಅಜ್ಜಿ, ಫು-ಚುವಾನ್, ಯು-ಲಿಯನ್ ಮುಂತಾದ ಹತ್ತಾರು ಮಂದಿ ಸಭೆ ಸೇರಿ, ಓಡಿಹೋಗಿದ್ದ ಪೆಂಗ್-ಎರುವನ್ನು ಹೇಗೆ ಸೆರೆಹಿಡಿಯಬೇಕೆಂಬುದನ್ನು ಚರ್ಚಿಸಿದರು. 'ಪಂಡಿತ' ಸಿಯನ್‌ನೂ ಸಭೆಗೆ ಬರುತ್ತಿದ್ದನು. ಆದರೆ ಸೀವು, ಅವನನ್ನು ದಾರಿಯಲ್ಲೇ ತಡೆದು, ಪೆಂಗ್-ಎರುವನ್ನು ಸೆರೆ ಹಿಡಿದ ನಂತರ ನೀನು ಬರಬಹುದೆಂದು ಹೇಳಿ ಹಿಂದಕ್ಕೆ ಕಳುಹಿಸಿಬಿಟ್ಟನು.

ಎಲ್ಲರೂ ಬಂದ ಮೇಲೆ, ಸೀವು ಮಾತಿಗಾರಂಭಿಸಿದ : ಪೆಂಗ್-ಎರು ನನ್ನನ್ನೂ ಗುಂಡಿನ ಬಾಯಿಗೆ ಕಟ್ಟಿದ್ದ. ಕಮ್ಯೂನಿಸ್ಟರಿಲ್ಲದಿದ್ದರೆ, ಇಷ್ಟು ಹೊತ್ತಿಗೆ ಸ್ಮಶಾನದಲ್ಲಿರುವ ಬೂದಿಯ ಜೊತೆಯಲ್ಲಿ ನಾನೂ ಭಸ್ಮವಾಗಿರುತ್ತಿದ್ದೆ. ನಾನು ಮತ್ತು ನನ್ನ ಅಣ್ಣ-ಇಬ್ಬರೂ ೫ ಟೌ ಹೊಲದಿಂದ ಜೀವನ ಸಾಗಿಸುತ್ತಿದ್ದೆವು. ೧೯೩೮ ರಲ್ಲಿ, ಪೆಂಗ್-ಟೆಂಗ್, ನಮ್ಮ ಅಣ್ಣನನ್ನು ಯುದ್ಧಕ್ಕೆ ಹೋಗಬೇಕೆಂದು ಕಾಡತೊಡಗಿದ. ಆಗ ನಮ್ಮಲ್ಲಿದ್ದ ಹೊಲವನ್ನು ಮಾರಿ, ಆ ಹಣದಿಂದ ಬೇರೆಯವರನ್ನು ಕಳುಹಿಸಿದೆವು. ಹೊಲವಿಲ್ಲದೆ ನಾವು ಪೆಂಗ್-ಎರುವಿನ ಮನೆಯಲ್ಲಿ ಕೆಲಸಕ್ಕೆ ಸೇರಬೇಕಾಯಿತು. ಆದರೆ ಎರಡು ತಿಂಗಳ ನಂತರ ಯುದ್ಧಕ್ಕೆ ಯಾರು ಹೋಗಬೇಕೆಂದು ನಿರ್ಧರಿಸುವ ಲಾಟರಿಯಲ್ಲಿ ನನ್ನ ಅಣ್ಣನ ಹೆಸರೇ ಪುನಃ ಬಂದಿತು. ಅದೇ ಸಮಯದಲ್ಲಿ ಲೀ-ಅಜ್ಜಿಯ ಮಗನ ಹೆಸರೂ ಬಂದಿತು. ಆ ಲಾಟರಿಯಲ್ಲಿ, ಹಂದಿಯಂತೆ ಕೊಬ್ಬಿ ಬೆಳೆದ ಜಮೀನ್ದಾರರ ಮಕ್ಕಳುಗಳ ಹೆಸರೇ ಬರುತ್ತಿರಲಿಲ್ಲ. ೧೯೪೫ ರಲ್ಲಿ ನನ್ನಸರದಿ ಬಂದಿತು. ನನಗೆ ಯಾವ ವಿಧವಾದ ಕ್ರೋಧವಾಗಲೀ ದ್ವೇಷವಾಗಲಿ ಇಲ್ಲ. ಜನರ ವಿರುದ್ಧ ಹೋರಾಡುವುದು ಕಷ್ಟವಾಗಿ ಕಂಡುಬಂತು. ಟ್ಸಿನಾನ್‌ನಲ್ಲಿ ನಾನು ಮೊದಲ ಸಲ ಸಾವನ್ನು ತಪ್ಪಿಸಿ ಕೊಂಡೆ. ಆದರೆ ಮುಕ್ಡೆನ್‌ನಲ್ಲಿ ನನ್ನ ಹೊಟ್ಟೆಯ ಪಕ್ಕಕ್ಕೆ ಗುಂಡಿನೇಟು ತಗುಲಿತು. ಉರಿವ ಬೇಸಿಗೆಯ ಬಿಸಿಲಿನಲ್ಲಿ ಮೂರು ದಿನಗಳವರೆಗೆ ನೀರು

ಸಹಾ ಇಲ್ಲದೆ ಯುದ್ಧಭೂಮಿಯಲ್ಲೇ ಬಿದ್ದಿದ್ದೆ. ನನ್ನ ಅದೃಷ್ಟಕ್ಕೆ ಕೋಮಿಂಟಾಂಗ್ ಸೈನ್ಯ ಬೇಗ ನಾಶವಾಯಿತು. ಜನತಾ ಸೈನ್ಯದವರು ನನ್ನನ್ನು ಹತ್ತಿರದಲ್ಲಿದ್ದ ಆಸ್ಪತ್ರೆಗೊಯ್ದು ಉಪಚರಿಸಿದರು. ನನಗೆ ಓದು-ಬರಹವನ್ನು ಕಲಿಸಿದರು. ಕ್ರಾಂತಿ ಏಕೆ ಒಳ್ಳೆಯದು ಮತ್ತು ಪ್ರತಿಗಾಮಿಗಳು ಏಕೆ ಕೆಟ್ಟವರು ಎಂದು ಆಗ ನನಗೆ ಅರ್ಥವಾಯಿತು. ನನಗೆ ಸ್ವಲ್ಪ ಗುಣವಾದ ಮೇಲೆ, ಕೋಮಿಂಟಾಂಗ್ ಸೈನ್ಯದ ಮೇಲೆ ಸೇಡು ತೀರಿಸಿಕೊಳ್ಳಲು ಪುನಃ ಯುದ್ಧಭೂಮಿಗೆ ಕಳುಹಿಸಿ ಎಂದು ಕೇಳಿಕೊಂಡೆ. ಆದರೆ ವೈದ್ಯರು ಅದಕ್ಕೆ ಸಮ್ಮತಿಸಲಿಲ್ಲ. ನನ್ನ ಕೈಲಾದಷ್ಟನ್ನು ಯುದ್ಧ ಶಿಬಿರದಲ್ಲೇ ಮಾಡುತ್ತಿದ್ದೆ. ಕಮ್ಯೂನಿಸ್ಟರು ನನಗೆ ಜೀವದಾನಮಾಡಿದ್ದಲ್ಲದೆ, ನಿಶ್ಶಕ್ತನಾಗಿದ್ದುದರಿಂದ ಕರುಣೆಯಿಂದ ಸೈನಿಕವೃತ್ತಿಯಿಂದ ಬಿಡಿಸಿ, ಒಂದು ಜೊತೆ ಪೋಷಾಕನ್ನೂ, ಕೈಮೇಲೆ ಸ್ವಲ್ಪ ಹಣ, ದವಸವನ್ನೂ ಕೊಟ್ಟು ಊರಿಗೆ ಹಿಂತಿರುಗಿ ಕಳುಹಿಸಿಕೊಟ್ಟರು...."ಎಂದು ಮಾತು ಮುಗಿಸಿದನು.

ಲೀ-ಅಜ್ಜಿ, ತಲ್ಲೀನಳಾಗಿ ಅವನ ಮಾತನ್ನು ಕೇಳುತ್ತಿದ್ದವಳು, ಮಾತು ಮುಗಿಯುವ ಹೊತ್ತಿಗೆ, ಗಟ್ಟಿಯಾಗಿ ಅಳತೊಡಗಿದಳು— ತನ್ನ ಮಗ ಟಿ-ಮಿಂಗ್‌ನೂ ಹೊಸಪೋಷಾಕು ಧರಿಸಿ ಹಿಂದಿರುಗಿ ಬಂದಿದ್ದರೆ!

"ನಾನು ವಯಸ್ಸಾದ ಮುದುಕಿ" ಎಂದು ಬಿಕ್ಕಳಿಸುತ್ತಾ ಹೇಳಿದಳು. "ನನ್ನ ಗೋಳನ್ನೂ ಸ್ವಲ್ಪ ಕೇಳಿ. ನನ್ನ ಮಗ ಟಿ-ಮಿಂಗ್‌ನ ಮೂಳೆಗಳು ಎಲ್ಲಿ ಬಿದ್ದಿವೆಯೋ ನನಗೆ ತಿಳಿಯದು. ಆದರೆ ಇದಕ್ಕೆಲ್ಲಾ ಆ ಪೆಂಗ್-ಎರವೇ ಕಾರಣನೆಂದು ಮಾತ್ರ ಗೊತ್ತು. ನನಗೆ ನಾಲ್ವರು ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡು ಮಕ್ಕಳು ಇದ್ದರು. ಈಗ ಚುನ್-ಸಿಂಗ್ ಳೊಬ್ಬಳೇ ನನ್ನ ಪಾಲಿಗೆ ಉಳಿದಿರುವವಳು. ನನಗೆ ಅವರನ್ನು ಸಾಕಲು ಗೊತ್ತಿಲ್ಲದೆ ಅವರು ಸಾಯಲಿಲ್ಲ. ನಾಲ್ಕು ಮಕ್ಕಳೂ ಹಸಿವು-ಚಳಿಗೆ ಸಿಕ್ಕಿ ಸತ್ತರು. ಒಂದು ಹೆರಿಗೆಯಲ್ಲಿ ಮಗುವಿನ ಮೇಲೆ ಹೊದಿಸಲು ನನ್ನ ಬಳಿ ಒಂದು ಚೂರು ಬಟ್ಟೆಯೂ ಇರಲಿಲ್ಲ. ನೆರಮನೆಯವರು ಕೊಟ್ಟ ಹುಲ್ಲಿನಲ್ಲಿ ಎಳೆಯ ಮಗುವನ್ನು ಮುಚ್ಚಿದೆನು.



"ಮುದುಕಿಯ ರೋದನಕ್ಕೆ ಕೊನೆಮೊದಲಿಲ್ಲವಾಯಿತು___ಅವಳನ್ನು ಸಮಾಧಾನಪಡಿಸಲಾಗಲಿಲ್ಲ"
ಅಜ್ಜಿ ಲೀ, ಬಿಕ್ಕಿಬಿಕ್ಕಿ ಅಳತೊಡಗಿದಳು.

“ನಾನೇನು ಸೋಮಾರಿಯಾಗಿ ಕುಳಿತರಲಿಲ್ಲ. ಹಗಲಿರುಳೂ ಆ ಜಮೀನ್ದಾರನಿಗಾಗಿ ದುಡಿದೆ. ದೊರೆತ ಪ್ರತಿಫಲ—ಈ ನರಕಯಾತನೆಗಳು! ಹೊಟ್ಟೆಗಿಲ್ಲದೆ ನನ್ನ ಶರೀರ ಕೃಶವಾಯಿತು. ಎದೆಯಲ್ಲಿ ಹಾಲು ಇಂಗಿತು, **ಹಾಲಿಲ್ಲದೆ ಒಂದಾದಮೇಲೊಂದರಂತೆ ಮಕ್ಕಳು ತೀರಿಹೋದವು.** ಮೂರನೆಯ ಮಗುವನ್ನು ನಾನೇ ಕತ್ತುಹಿಸುಕಿ ಕೊಂದೆ.” ಹೀಗೆ ಹೇಳುವಾಗ ಮುದುಕಿ ಗಟ್ಟಿಯಾಗಿ ರೋದಿಸತೊಡಗಿದಳು. “ಇನ್ನೇನು ಮಾಡುವುದು. ಹೊಟ್ಟೆಗಿಲ್ಲದೆ ಒದ್ದಾಡಿ ಸಾಯುವುದನ್ನು ನೋಡುವುದಕ್ಕಿಂತ, ಒಂದೇಬಾರಿಗೆ ಕೊಲ್ಲುವುದು ಒಳ್ಳೆಯದಲ್ಲವೇ? ಕೊನೆಗೆ ಒಬ್ಬ ಮಗ, ಒಬ್ಬ ಮಗಳು ಉಳಿದಿದ್ದರು. ನೀಚ ಪೆಂಗ್-ಎರುವು ನನ್ನ ೧೯ ವರ್ಷದ ಮಗನನ್ನು ಹಿಡಿದುಕೊಂಡು ಹೋದ. ನಾನು ಅವನನ್ನು ಅತಿಪ್ರೀತಿಯಿಂದ, ಭಿಕ್ಷಾನ್ನದಿಂದ ದೊರೆತ ಸ್ವಲ್ಪ ಆಹಾರವನ್ನೇ ಕೊಟ್ಟು ಬೆಳೆಸಿದ್ದೆ. ನಮ್ಮಿಬ್ಬರನ್ನು ಬಿಟ್ಟು ಅವನು ಹೊರಟುಹೋದ, ಹಿಂದಿರುಗಲಾಗದ ಜಾಗಕ್ಕೆ ಹೊರಟುಹೋದ.

ಮುದುಕಿಯ ರೋದನಕ್ಕೆ ಕೊನೆಮೊದಲಿಲ್ಲವಾಯಿತು. ಸಿ-ವುನ ಹೆಂಡತಿಯು ಎಷ್ಟು ಪ್ರಯತ್ನಪಟ್ಟರೂ ಅವಳನ್ನು ಸಮಾಧಾನಪಡಿಸಲಾಗಲಿಲ್ಲ.

‘ನನ್ನ ೫೩ ವರ್ಷದ ಜೀವಿತ ಕಾಲದಲ್ಲಿ ಒಂದು ದಿನವೂ ಸುಖವನ್ನನುಭವಿಸಿದವಳಲ್ಲ. ನಾನು ೩ ವರ್ಷದ ಮಗುವಾಗಿದ್ದಾಗಲೇ ತಾಯಿಯು ತೀರಿಕೊಂಡಳು. ಎಂಟನೇ ವಯಸ್ಸಿಗೆ ನನಗೆ ಮದುವೆಯಾಯಿತು. ಮೊದಲು ಅತ್ತೆಯಿಂದ ಕೆಲಸಕ್ಕೆ ಸೇರಿದಮೇಲೆ ಜಮೀನ್ದಾರನ ಒಡತಿಯಿಂದಲೂ ಹೊಡೆತ ತಿನ್ನುತಿದ್ದೆ. ಒಂದು ವರ್ಷದಲ್ಲಿ ಮೂರು ತಿಂಗಳು ಬರೀಗೆಣಸು, ಆರು ತಿಂಗಳು ಒಣಗಿದ ಆಲೂಗೆಡ್ಡೆಯಲ್ಲೇ ಕಾಲಕಳೆದೆ.

“೨೦ ವರ್ಷಗಳು ನಾನು ಮತ್ತು ನನ್ನಗಂಡ ಕಷ್ಟಪಟ್ಟು ದುಡಿದ ಮೇಲೆ ೪ ಟೌ ಕುಷ್ಕಿ ಜಮೀನನ್ನು ಕೊಂಡೆವು. ನನ್ನ ಗಂಡನಿಗೆ ಆರೋಗ್ಯ ಚೆನ್ನಾಗಿರಲಿಲ್ಲ. ಒಂದು ದಿನ ಮಧ್ಯಾಹ್ನ ಜಮೀನ್ದಾರನ ಹೊಲದಲ್ಲಿ ಏತದ ರಾಟೆಯನ್ನು ತಿರುಗಿಸುತ್ತಿದ್ದಾಗ ಜ್ಞಾನ ತಪ್ಪಿ ಬಿದ್ದು ಬಿಟ್ಟನು.

ಅವನ ಔಷಧೋಪಚಾರಕ್ಕಾಗಿ ಒಂದು ಟೌ ಹೊಲವನ್ನು ಮಾರಿದೆ. ಜಪಾನೀಯರು ಬಂದ ಮೇಲೆ ಅ ಕುಡುಕ ಪೆಂಗ್-ಟೆಂಗ್‌ನು ನನ್ನ ಯಜಮಾನನನ್ನು ಯುದ್ಧ ಶಿಬಿರದಲ್ಲಿ ಸಹಾಯ ಮಾಡುವುದಕ್ಕೆಂದು ಎಳೆದುಕೊಂಡು ಹೋದನು. ಒಂದು ದಿನ, ಯಾವ ಕಾರಣಕ್ಕೋ ಏನೋ, ನನ್ನ ಯಜಮಾನನನ್ನು ಅವರು ವಿಪರೀತ ದಂಡಿಸಿದ್ದರು. ಅವನು ತೆವಳಿಕೊಂಡು ತುಂಬ ಕಷ್ಟದಿಂದ ಮನೆಸೇರಿದ್ದ. ಬಟ್ಟೆಯೆಲ್ಲವೂ ರಕ್ತದಿಂದ ನೆಂದಿತ್ತು. ಗಾಯುಗಳಿಂದ ಒಂದೇಸಮನೇ ರಕ್ತ ಸುರಿಯತೊಡಗಿತು. ಇನ್ನೊಂದು ಟೌ ಹೊಲವನ್ನು ಮಾರಿ ಔಷಧಿಕೊಡಿಸಿದೆ. ಆದರೆ ಏನು ಮಾಡಿದರೂ ಬದುಕಲಿಲ್ಲ. ಅವನ ಉತ್ತರಕ್ರಿಯೆಗಳನ್ನು ಸಾಂಗವಾಗಿ ನೆರವೇರಿಸಲು ಇನ್ನೊಂದು ಟೌ ಹೊಲವನ್ನು ಮಾರಿದೆ.

"ಉಳಿದ ತಾಯಿ-ಮಗಳು ನಮ್ಮಿಬ್ಬರಿಗೂ ಒಂದು ಟೌ ಹೊಲದಲ್ಲಿ ಜೀವನ ಮಾಡುವುದು ಕಷ್ಟವಾಯಿತು. ಲೋ-ಪೈ-ಜಂಗ್ ನಿಂದ ೫ ಷೆಂಗ್ ಬತ್ತ, ಒಂದು ಟೌ ಕಾಳನ್ನು ಸಾಲತಂದೆ. ಎರಡು ತಿಂಗಳುಗಳಾದ ಮೇಲೆ, ಬಡ್ಡಿ ಸೇರಿಸಿ ನಮ್ಮ ಸಾಲ ತೆಗೆದುಕೊಂಡಿದ್ದಕ್ಕಿಂತ ಇಪ್ಪತ್ತರಷ್ಟು ಹೆಚ್ಚಿದೆಯೆಂದು ಹೇಳಿ, ಆ ಜಮೀನ್ದಾರ ನನ್ನಲ್ಲಿ ಉಳಿದಿದ್ದ ಒಂದು ಟೌ ಹೊಲವನ್ನು ಕಸಿದುಕೊಂಡ, ನನ್ನ ಮಗಳು ಮೂರು ವರ್ಷ ಭಿಕ್ಷೆಬೇಡಿ ನನ್ನನ್ನು ಸಾಕಿದಳು. ಅವಳ ಕಷ್ಟವನ್ನು ನೋಡಲಾರದೆ, ಅವಳ ಬಾಲ್ಯ ವಿವಾಹಕ್ಕೆ ಸಮ್ಮತಿಸಿದೆ. ಬಾಲ್ಯವಿವಾಹದ ದುರಂತಗಳು ನನಗೆ ತಿಳಿಯದೇ ಇಲ್ಲ. ಆದರೆ ವಿಧಿ ಇಲ್ಲದೆ ಹಾಗೆಮಾಡಬೇಕಾಯಿತು. ನೋಡಪ್ಪ, ಸ್ವಾಮಿ, ನಾನು ಹೃದಯವಿಲ್ಲದ ಕ್ರೂರಮೃಗವಲ್ಲ ; ಹುಚ್ಚಿಯೂ ಅಲ್ಲ. ನಾನು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಯಾರ ಮುಂದೆಯೂ ಹೇಳಿಕೊಳ್ಳಲಾರದೆ ಇದುವರೆಗೂ ಪೇಚಾಡುತ್ತಾ ಹುಚ್ಚಳಂತೆ ವರ್ತಿಸುತ್ತಿದ್ದೆ ಅಷ್ಟೆ."

ಲು-ಯಾಂಗ್‌ನು ಹೇಳಿದನು : "ಲೀ ಅಜ್ಜಿಯನ್ನು ಇನ್ನು ಮುಂದೆಯೂರೂ 'ಹುಚ್ಚಿ' ಎಂದು ಕರೆಯ ಬೇಡಿ. ಇನ್ನು ನಮ್ಮ ಮುಂದಿನ ಕೆಲಸಗಳಲ್ಲಿ ತೊಡಗೋಣ. ಪೆಂಗ್-ಎರುವೇ ಅನೇಕರ ಕಷ್ಟಕ್ಕೆಲ್ಲಾ ಕಾರಣನು. ನಿಮ್ಮ ಸಹಾಯದಿಂದ ಅವನನ್ನೆಷ್ಟಿದ್ದಷ್ಟು ಜಾಗ್ರತೆ ಹಿಡಿಯಬೇಕಾಗಿದೆ.

ಇದಕ್ಕೆ ನೀವೂ ಮನಃ ಪೂರ್ತಿಯಾಗಿ ಕೆಲಸಮಾಡಬೇಕು. ಜಮಿನ್ದಾರರು ಎಸಗಿದ ಪಾಪಕೃತ್ಯಗಳ ಪಟ್ಟಿ, ಪ್ರತ್ಯಕ್ಷ ಸಾಕ್ಷ್ಯಗಳು ನಿಮ್ಮಲ್ಲಿವೆ. ಅವರನ್ನು ವಿಚಾರಣೆಗೆ ಗುರಿಪಡಿಸಿದಾಗ, ನೀವು ಅವುಗಳನ್ನು ಮುಂದಿಡಲು ಸಿದ್ಧರಾಗಿರಬೇಕು."

ಎಲ್ಲರೂ ಒಪ್ಪಿದರು. ಅನಂತರ ಕುವಾಂಗ್-ಲಾನ್‌ನು, ತನ್ನಲ್ಲಿದ್ದ ೩ ಟೌ ಭೂಮಿಯನ್ನು ಜಮಿನ್ದಾರ ಲೋ ಪೈ-ಜಂಗ್‌ನು ಹೇಗೆ ಮೋಸದಿಂದ ವಶಪಡಿಸಿಕೊಂಡಿದ್ದೇ ಅಲ್ಲದೆ, ಗುತ್ತಿಗೆ ಹಣವನ್ನು ಶೇ. ೩೦ ರಷ್ಟು ಹೆಚ್ಚಿಸಿ, ಇನ್ನು ಮೂರುವರ್ಷಗಳವರೆಗೆ ಆ ಪ್ರದೇಶದಲ್ಲಿ ಸೌದೆ ಕಡಿಯಕೂಡದೆಂದೂ, ಕೊಳದಲ್ಲಿ ಮೀನು ಹಿಡಿಯಕೂಡದೆಂದೂ ಕರಾರು ಬರೆಸಿಕೊಂಡಿದ್ದನ್ನು ವಿವರಿಸಿದನು. ಅದೇರೀತಿ ಯು-ಟಿಯನ್‌ಳೂ ಪೆಂಗ್-ಎರುವಿನ ಕಿರಿಹೆಂಡತಿಯಿಂದ ಅನುಭವಿಸಿದ ಕಿರುಕುಳವನ್ನೆಲ್ಲಾ ಮನಕರಗುವಂತೆ ವಿವರಿಸಿವಳು.

* * * *

ಹೀಗೆ ಲು-ಯಾಂಗ್‌ನು ೫ ದಿನಗಳವರೆಗೆ ಹಳ್ಳಿಯ ರೈತರ ಕಷ್ಟಗಳನ್ನೂ, ಜಮಿನ್ದಾರರ ಮೋಸಕೃತ್ಯಗಳನ್ನೂ ಕೇಳಿದನು. ಎಲ್ಲರೂ ತಮ್ಮ ಕಷ್ಟಗಳಿಗೆಲ್ಲ ದುರದೃಷ್ಟವೇ ಕಾರಣವೆಂದು ಹೇಳುತ್ತಿದ್ದರು. ಹಾಗೆ ಹೇಳುವುದು ಎಷ್ಟು ತಪ್ಪಾಗುತ್ತದೆಂಬುದನ್ನು ಅವರಿಗೆ ಚೆನ್ನಾಗಿ ತಿಳಿಯಪಡಿಸಲು, ಲು-ಯಾಂಗ್‌ನು, ಭೂಸೂಧಾರಣಾದಳದ ನಾಯಕ ಚಿ-ಮಿನ್‌ನ ಜೀವನವನ್ನೇ ನಿದರ್ಶನವಾಗಿತ್ತು, ಹೇಗೆ ಕೆಲಸವಿಲ್ಲದೆ ಅಲೆಯುತ್ತಿದ್ದ ಆತ, ಜನತಾ ಸೈನ್ಯದವರ ಸಹಾಯದಿಂದ ವಿದ್ಯಾವಂತನಾಗಿ, ಅವನ ಹಳ್ಳಿಯ ಪೌರಸಭೆಯ ಉಪಾಧ್ಯಕ್ಷನಾಗಿರುವನೆಂಬುದನ್ನು ವಿಶದ ಪಡಿಸಿದ. ಅದೃಷ್ಟ, ದುರದೃಷ್ಟಗಳೆಂಬ ಭವಿಷ್ಯ ಹೇಳುವವರ ಮಾತೆಲ್ಲ ಮೋಸದ ಕಂತೆಯೆಂದು ಹೇಳಿ, ಅವರಲ್ಲಿದ್ದ ಮೂಢನಂಬಿಕೆಗಳನ್ನು ತೊಡೆದು ಹಾಕುವಂತೆ ಕೇಳಿಕೊಂಡ. ಕೊನೆಗೆ ಎಲ್ಲರೂ ಸೇರಿ ಶಿವುನನ್ನು ಮುಖಂಡನನ್ನಾಗಿ ಚುನಾಯಿಸಿದರು.

ಮಾರನೆಯದಿನ ಮಧ್ಯಾಹ್ನ, ಲು-ಯಾಂಗ್‌ನ ಅಭಿಪ್ರಾಯಕ್ಕನು ಸಾರವಾಗಿ ಎಲ್ಲರೂ ತಮ್ಮ ತಾಯಂದರು, ಹೆಂಡತಿಯರು, ಅತ್ತೆಯರು, ಮತ್ತು ಅತ್ತಿಗೆಯನರನ್ನು ಕರೆದುಕೊಂಡು ಬಂದರು.

ಸೊಸೆಯರು ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಯು-ಲಿಯನ್‌ಳು, ತನ್ನ ತಂದೆಯು ಎರಡು ಪಿಕಲ್ ದವಸ ಸಾಲಕೊಡಬೇಕಾದುದರಿಂದ, ಪೆಂಗ್-ಎರು ಹೇಗೆ ತನ್ನನ್ನು ಎಳೆದುಕೊಂಡು ಹೋಗಿದ್ದನೆಂಬುದನ್ನು ಎಲ್ಲರ ಕಣ್ಣಲ್ಲೂ ನೀರು ಬರುವಂತೆ ಹೇಳಿದಳು. ಇನ್ನೂ ಅನೇಕರು ಸಂಸಾರದಲ್ಲಿ ತಮಗಾಗುತ್ತಿರುವ ಕಷ್ಟನಿಷ್ಠುರಗಳನ್ನು ವಿವರಿಸಿದರು.

ಲು-ಯಾಂಗ್‌ನು ಎಲ್ಲರ ಮಾತನ್ನು ಸಾವಧಾನವಾಗಿ ಕೇಳಿ, ಕೊನೆಗೆ ಹೀಗೆ ಹೇಳಿದನು : "ಮನೆಯ ಒಳಜಗಳಗಳಿಗೇ ಹೆಚ್ಚು ಗಮನವಿತ್ತು ಜಮೀನ್ದಾರರು ನಮಗೆ ಮಾಡುತ್ತಿರುವ ಅನ್ಯಾಯಗಳನ್ನು ನಾವು ಮರೆಯು ವಂತಾಗಬಾರದು. ಇಂತಹ ಸಂಸಾರ ಸಮಸ್ಯೆಗಳಿಗೆಲ್ಲ, ವಿದ್ಯೆ ಇಲ್ಲದಿರು ವುದು ಮತ್ತು ಸಾಕಷ್ಟು ಉಣಲು-ತೊಡಲು ಅನುಕೂಲತೆಗಳಿಲ್ಲದಿರುವುದೇ ಕಾರಣವಾಗಿದೆ. ಜಮೀನ್ದಾರಿ ವರ್ಗವನ್ನು ನಿರ್ಮೂಲಮಾಡಿ ಎಲ್ಲರಿಗೂ ಭೂಮಿದೊರೆತು, ಓದು-ಬರಹ ಬರುವಂತಾಗಿ, ಜೀವನ ಸುಖಮಯವಾದರೆ, ಈ ಒಳಜಗಳಗಳೆಲ್ಲಾ ಕಡಿಮೆಯಾಗುವುವು.

"ಆದ್ದರಿಂದ ಹೆಂಗಸರೂ, ಗಂಡಸರೊಂದಿಗೆ ಜಮೀನ್ದಾರಿವರ್ಗವನ್ನು ತಳ್ಳಿಹಾಕುವುದರಲ್ಲಿ ಸಹಾಯ ಮಾಡಬೇಕು. ಗಂಡಸರಂತೆ ಹೆಂಗಸರಿಗೂ ಭೂ ಹಂಚಿಕೆ ನಡೆದಾಗ ಪಾಲು ದೊರಕುವುದು. ಒಟ್ಟು ಜನಸಂಖ್ಯೆಯಲ್ಲಿ ಹೆಂಗಸರು ಅರ್ಧಭಾಗವಿದ್ದಾರೆ. ಅವರ ಸಹಕಾರವಿಲ್ಲದೆ ಜಮೀನ್ದಾರ ವರ್ಗವನ್ನು ತಳ್ಳಿಹಾಕುವುದಿಲ್ಲ, ಮತ್ತು ಎಂದಿನವರೆಗೆ ಜಮೀನ್ದಾರಿವರ್ಗದ ನಾಶವಾಗದೋ, ಅಲ್ಲಿನವರೆಗೆ ಹೆಂಗಸರಾಗಲೀ, ಗಂಡಸರಾಗಲೀ, ಸ್ವತಂತ್ರ ವಾಗಿ ಸೌಖ್ಯದಿಂದ ಇರಲು ಸಾಧ್ಯವಿಲ್ಲ."

ಈ ಮಾತುಗಳು ಹೆಂಗಸರಿಗೆ ತುಂಬ ಹಿತವಾಗಿ ಕಂಡು ಬಂದವು. ಅವರೂ ಪುನಃ ೨-೩ ಬಾರಿ ಸಭೆಸೇರಿ ಮಹಿಳೆಯರ ಸಂಘ ಸ್ಥಾಪಿಸಿ, ಭೂ ಸುಧಾರಣೆಯ ಕೆಲಸದಲ್ಲಿ ಎಲ್ಲರೂ ಒಮ್ಮತದಿಂದ ಭಾಗವಹಿಸಬೇಕೆಂದು ನಿರ್ಧರಿಸಿದರು.

ಒಂದು ದಿನ ಸಭೆ ಮುಗಿದ ಮೇಲೆ, ಹೆಂಗಸರು ಮನೆಗಳಿಗೆ ಹಿಂದಿರು ಗುತ್ತಿದ್ದಾಗ, ಯು-ಲಿಯನ್‌ಳು ಅವರ ಮಧ್ಯದಿಂದ ನುಗ್ಗಿಬಂದು, ಲು-ಯಾಂಗ್‌ನ ಕೈಗೆ ಲಕ್ಕೋಟೆಯೊಂದನ್ನು ಕೊಟ್ಟಳು. ತನ್ನ ಯಜಮಾನಿತಿಗೆ ಅದನ್ನು ಇನ್ನೂ ತೋರಿಸಿಲ್ಲವೆಂದೂ, ಫುಚುವಾನನ ಇಷ್ಟದಂತೆ ಅಲ್ಲಿಗೆ ತಂದಳೆಂದೂ ಹೇಳಿದಳು.

ಲು-ಯಾಂಗ್‌ನು ಲಕೋಟೆಯನ್ನು ತಿರುಗಿಸಿ ಮುರುಗಿಸಿ ನೋಡಿದನು. ಎಲ್ಲೂ ವಿಳಾಸವಿರಲಿಲ್ಲ. ಒಂದು ಕಡೆ, "ದಯವಿಟ್ಟು ನನ್ನ ಹೆಂಡತಿಗೆ ಕೊಡಿ"ಎಂದೂ, ಇನ್ನೊಂದು ಕಡೆ "ಒಳಗೆ ಏನಿದೆ ಓದಿ" ಎಂದೂ ಬರೆದಿದ್ದಿತು. ಲಕೋಟೆಯನ್ನು ಒಡೆದು ಒಳಗಿದ್ದ ಕಾಗದದಲ್ಲಿ ಬರೆದಿರುವುದನ್ನು ಓದಿದನು.

"ನಾನು ಈಗ ಚಿಕ್ಕಪ್ಪ ಯ್ಯುನ ಮನೆಯಲ್ಲಿ, ಪಟ್ಟದಲ್ಲಿದ್ದೇನೆ. ಎಲ್ಲ ಕ್ಷೇಮ. ಯೋಚಿನಬೇಡ."

ಸಹಿ ಹಾಕುವ ಜಾಗದಲ್ಲಿ, "ನಿನಗೆ ಗೊತ್ತಿರುವ ಒಬ್ಬರಿಂದ" ಎಂದಿತ್ತು.

ಲು-ಯಾಂಗ್‌ನಿಗೆ ತಕ್ಷಣವೇ ಹೊಳೆದುಹೋಯಿತು. ಕಳ್ಳ ಪೆಂಗ್-ಎರುವಿನದೇ ಈ ಕಾಗದ! ಇನ್ನು ಯಾರು ಹೀಗೆ ಬರೆಯುವವರು ?

ಕೂಡಲೇ ಔಪಸ್ಥಾನಕ್ಕೆ ಬರುವಂತೆ ಫು-ಚುವಾನನಿಗೆ ಹೇಳಿಕಳುಹಿಸಿದನು.

"ಪಟ್ಟಣದಲ್ಲಿ ಪೆಂಗ್-ಎರುವಿನ ಚಿಕ್ಕಪ್ಪ ಯ್ಯು ಎಂಬುವನ ಮನೆ ನಿನಗೆ ಗೊತ್ತೆ ?" ಎಂದು ಲು-ಯಾಂಗ್ ಫುಚುವಾನ್‌ನನ್ನು ಕೇಳಿದನು. ಒಂದು ಸಲ ಪೆಂಗ್-ಎರುವೇ, ದವಸವನ್ನೂ, ಕೋಳಿಮರಿಗಳನ್ನೂ ಕೊಟ್ಟು ಬರಲು ತನ್ನನ್ನು ಪಟ್ಟಣಕ್ಕೆ ಕಳುಹಿಸಿದುದು ಫುಚುವಾನನಿಗೆ ಥಕ್ಕನೆ ನೆನಪಿಗೆ ಬಂತು. ಅವನ ಮನೆ, ರೈಲ್ವೆ ನಿಲ್ದಾಣದ ಬಳಿ, ವಾನ್‌ಕ್ವಾ ಸೇತುವೆಯ ಸಮೀಪದಲ್ಲಿದೆ ಎಂಬುದು ಹೊಳೆಯಿತು.

"ಸರಿ. ಹಾಗಾದರೆ, ಪೇಟೆಗೆ ಇನ್ನೊಮ್ಮೆ ಹೋಗಿಬರಲು ಸಿದ್ಧನಾಗು. ಈ ಬಾರಿ ಬುಟ್ಟಿಯನ್ನು ಹೊತ್ತುಕೊಂಡು ಹೋಗಬೇಕಾದ್ದಿಲ್ಲ.

ಆದರೆ ಬರುವಾಗ ಮಾತ್ರ ಪೆಂಗ್-ಎರುವನ್ನು ಜೀವ ಸಹಿತ ಹಿಡಿದು ತರಲು ಮರೆಯಬೇಡ." ಎಂದು ಲು-ಯಾಂಗ್ ಫುಚುವಾನನಿಗೆ ಹೇಳಿ ಕಳುಹಿಸಿ ಕೊಟ್ಟನು.

# ವಿಷಸರ್ಪಗಳ ವಿನಾಶ

ಸಿಯನ್ ಒಬ್ಬ ಶ್ರೀಮಂತ ರೈತನಾದ್ದರಿಂದ, ಬಡರೈತ ಮತ್ತು ರೈತ-ಕೂಲಿಕಾರರ ಸಂಘಟನೆಯಲ್ಲಿ ಅವನಿಗೆ ಸ್ಥಾನ ಸಿಗಲಿಲ್ಲ. ಇದರಿಂದ ಅವನಿಗೆ ಅಸೂಯೆ ಹುಟ್ಟಿತು. "ಕಳೆದ ಬಾರಿ, ಚಳಿಗಾಲದ ಕಂದಾಯದ ವ್ಯವಹಾರ ಗಳಿಗಾಗಿ ಪಟ್ಟಣಕ್ಕೆ ಹೋಗಲು ಇವರಿಗೆ ನಾನೇ ಬೇಕಾಗಿತ್ತು. ಈಗ? ಇರಲಿ, ಈ ನಿರಕ್ಷರಕುಕ್ಷಿಗಳಿಗೆ ಕೆಸರು ತುಳಿಯುವುದನ್ನು ಬಿಟ್ಟು ಇನ್ನೇನು ತಿಳಿದಿದೆ?" ಎಂದು ರೈತರನ್ನು ಹಾಸ್ಯಮಾಡುತ್ತಿದ್ದ. ತನ್ನನ್ನು ಬಿಟ್ಟು ಭೂ ಸುಧಾರಣೆ ಮುಂದುವರೆಯಲಾರದೆಂದು ಎಲ್ಲೆಲ್ಲೂ ಹೇಳಿಕೊಂಡು ಬರುತ್ತಿದ್ದ. ಬಡರೈತರಿಗೆ ಈ ವಿಷಯ ತಿಳಿದು ತುಂಬ ಖತಿಗೊಂಡರು.

ಅವನ ಮನೆಯಲ್ಲಿ ಹಾಲೂಡುವ ದಾದಿಯಾಗಿ ಕೆಲಸ ಮಾಡುತ್ತಿದ್ದ ಯೂ-ಚೆನ್‌ಳು ಅವನ ಮೋಸವನ್ನು ಬಯಲಿಗೆಳೆದಳು: "ಓಹೋ, ಇವನು ತೆರಿಗೆ ಸಲ್ಲಿಸುವ ಕಾರ್ಯ ವಹಿಸಿದ್ದನೋ? ರೈತರ ಪ್ರತಿನಿಧಿಯಾಗಿ ಹೋಗಿ, ನದಿಯ ಬದಿಯಲ್ಲಿರುವ ತನ್ನ ೫ ಟೌ ಜಮೀನಿನ ಲೆಕ್ಕವನ್ನು ಕೊಡದೆ, ೪ ಪಿಕಲ್‌ಗಳಷ್ಟು ಧಾನ್ಯದ ಸುಂಕವನ್ನು ಕಮ್ಮಿ ಕೊಟ್ಟು, ಸರ್ಕಾರಕ್ಕೆ ಮೋಸಮಾಡಿಲ್ಲವೇ? ಆದರೂ ಅವನ ಬಣಜಂಭವೆಷ್ಟು!"—ಚೆನ್‌ಳ ಮಾತುಗಳನ್ನು ಕೇಳಿ ರೈತರ ಕೋಪ ಇನ್ನೂ ಹೆಚ್ಚಾಯಿತು. ಕೆಲವರು ಅವನನ್ನು ಕೂಡಲೇ ಕೈದುಮಾಡಬೇಕೆಂದರು.

ಲು-ಯಾಂಗ್ ಇದಕ್ಕೆ ತಪ್ಪದೆ, "ನಮಗೆ ಬೇಕಾಗಿರುವುದು ಪೆಂಗ್-ಎರುವೇ ಹೊರತು, ಸಿಯನ್ ಅಲ್ಲ. ಅವನು ಹೊಟ್ಟೆಕಿಚ್ಚಿಗಾಗಿ ಹಾಗೆ ಆಡಿದ್ದಾನೆ ಅಷ್ಟೆ. ಕಾರ್ಯತಹ ಅವನೇನಾದರೂ ನಮ್ಮ ಕೆಲಸಕ್ಕೆ ಅಪಪ್ರಚಾರದ ಮೂಲಕವೋ, ಆಸ್ತಿಯನ್ನು ಬಚ್ಚಿಡುವ ಮೂಲಕವೋ, ತೊಂದರೆ ಮಾಡಿದರೆ, ಆಗ ಅವನನ್ನೂ ಸೆರೆಹಿಡಿಯೋಣ." ಎಂದು ಸರಿಯಾದ ಮಾರ್ಗವನ್ನು ತೋರಿಸಿಕೊಟ್ಟನು.

ಅಂದಿನ ಸಾಯಂಕಾಲದ ಸಭೆಯಲ್ಲಿ ಪುರಸೈನಿಕರ ದಳವೊಂದನ್ನು ನಿರ್ಮಿಸಲಾಯಿತು. ಸೈನಿಕ ವೃತ್ತಿಗೆ ದೃಢಶಾಲಿಗಳಾದ, ದೈಹಿಕ ಶ್ರಮ

ವನ್ನು ಸಹಿಸಬಲ್ಲ ಯುವಕರೇ ಆಗಬೇಕಾದ್ದರಿಂದ, ೩೦ ಮತ್ತು ೬೦ ವಯಸ್ಸಿನೊಳಗಿರುವವರನ್ನೇ ಅರಿಸಲಾಯಿತು. ಮಧ್ಯಮವರ್ಗದ ರೈತರನ್ನೂ ಜಮಿಾನ್ದಾರರ ವಿರುದ್ಧ ನಡೆಸುವ ಚಳವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲು ಎಲ್ಲ ಕಾರ್ಯಕ್ರಮಗಳನ್ನೂ ಕೈಕೊಂಡರು.

ಹೀಗೆ ಮಧ್ಯಮ ವರ್ಗದ ರೈತರನ್ನೂ ತಮ್ಮ ಜೊತೆಗೆ ಸೇರಿಸಿದಾಗ ಅನೇಕ ಬಡರೈತರು, ಜನ ಹೆಚ್ಚಿದಷ್ಟೂ ತಮಗೆ ಬರುವ ಭೂಮಿಯ ಪಾಲು ಎಲ್ಲಿ ಕಮ್ಮಿಯಾಗುತ್ತದೋ ಎಂದು ಗೊಣಗುಟ್ಟಿದರು. ಲು-ಯಾಂಗ್‌ನು ಅವರನ್ನು ಸಮಾಧಾನಪಡಿಸುತ್ತಾ, 'ಭೂ ಸುಧಾರಣೆ'ಎಂದರೆ ಕೇವಲ ಭೂಮಿಯ ಹಂಚಿಕೆಯಲ್ಲ. ಜಮಿಾನ್ದಾರವರ್ಗವನ್ನು ಪೂರ್ತಿಯಾಗಿ ಎತ್ತಿ ಹಾಕಿ ರೈತರ ರಾಜಕೀಯ ವಿಮೋಚನೆಯನ್ನು ಸಾಧಿಸುವುದೂ ಅದರ ಗುರಿ. ಆದ್ದರಿಂದ, ಬಡರೈತರು ಮತ್ತು ರೈತ ಕೂಲಿಯಾಳುಗಳು ಮಧ್ಯಮ ವರ್ಗದ ರೈತರೊಂದಿಗೆ ಸೇರಿಕೊಂಡು ಒಟ್ಟಿಗೆ ಕೆಲಸಮಾಡಬೇಕು. ಈ ಐಕ್ಯರಂಗಕ್ಕೆ ಬಡರೈತರೇ ಬೆನ್ನುಮೂಳೆಯಂತಿರಬೇಕು."ಎಂದು ತನ್ನ ನಿಲುವನ್ನು ಸಮರ್ಥಿಸಿದ.

ಈ ಐಕ್ಯರಂಗದಲ್ಲಿ ಸಿಯುನ್‌ನಂತಹ ಶ್ರೀಮಂತ ರೈತರಿಗೆ ಸ್ಥಾನವಿರಲಿಲ್ಲ. ಅವನ ಒಳಗಡಗಿದ್ದ ಈರ್ಷೆ ಆಗಾಗ್ಗೆ ಹೊರಬೀಳುತ್ತಿತ್ತು. "ಕೊಡು, ಸಿಕ್ಕಿದ್ದೆಲ್ಲಾ ನುಂಗೋಣ. ಮೂರನೇ ಮಹಾಯುದ್ಧವಾಗಿ ಆಟಂ ಬಾಂಬು ಬಿದ್ದರೆ ಯಾರು ಉಳಿಯುತ್ತಾರೆ?''ಎಂದು ಊಟಕ್ಕೆ ಕುಳಿತಾಗ ತನ್ನ ಹೆಂಡತಿಗೆ ಹೇಳುತ್ತಿದ್ದ. ಪಕ್ಕದಲ್ಲೇ ಮಗುವಿಗೆ ಹಾಲು ಕುಡಿಸುತ್ತಿದ ಯೂ-ಚೆನ್ ಇದನ್ನು ಕೇಳಿದೊಡನೇ, "ಹಾಗೆ ಹೇಳುವುದು ಶುದ್ಧ ತುಪ್ಪು" ಎಂದು ಸ್ವಲ್ಪ ಗಡುಸಾಗಿಯೇ ಹೇಳಿದಳು.

"ನಾನು ಹೇಳುವುದು ತಪ್ಪೆಂದು ನಿನಗೆ ಹೇಗೆ ಗೊತ್ತು?''ಎಂದು ಸಿಯುನ್ ಕೇಳಿದ. ಯೂ-ಚೆನ್‌ಳಂತಹವಳು ಇಷ್ಟು ಗಡುಸಾಗಿ ಮಾತಾಡುವುದೆಂದರೇನು? ಪ್ರಪಂಚ ಯಾವ ಸ್ಥಿತಿಗಿಳಿದಿದೆ—ಎಂದು ಅವನಿಗೆ ಆಶ್ಚರ್ಯವಾಯಿತು.

"ಏಕೆಂದರೆ ನೀವು ಸುಳ್ಳುಸುದ್ದಿಗಳನ್ನು ಹುಟ್ಟಿಸುತ್ತಿದ್ದೀರಿ" ಎಂದು ಯೂ-ಚೆನ್ ಮತ್ತಷ್ಟು ಬಿಗುಮಾನದಿಂದ ನುಡಿದಳು.



ಯೂ-ಚೆನ್ನಳು ಒಂದು ಮಾತೂ ಆಡದೆ ಹೊರಟೇ ಬಿಟ್ಟಳು.

"ಏನು, ನನ್ನ ಬಳಿ ಊಳಿಗಕ್ಕಿದ್ದು, ನನ್ನ ಅನ್ನ ತಿನ್ನುತ್ತಿರುವ ಇವಳಿಗೆ ನನ್ನನ್ನು ಸುಳ್ಳು ಸುದ್ದಿ ಹುಟ್ಟಿಸುವವನು ಎಂದು ಆಪಾದಿಸುವುದಕ್ಕೆ

ಎಷ್ಟು ಧೈರ್ಯ—ಎಂದು ಯೋಚಿಸುತ್ತಾ ತುಂಬ ಕೋಪದಿಂದ, "ಸರಿ, ಹಾಗಾದರೆ ನೀನು ಇಲ್ಲಿಂದ ತೊಲಗಿಹೋಗು''ಎಂದು ಘರ್ಜಿಸಿದ.

ಯೂ-ಚೆನ್‌ಳು ತೊಡಯಮೇಲಿದ್ದ ಮಗುವನ್ನು ಕೆಳಗಿಟ್ಟು ಒಂದು ಮಾತೂ ಆಡದೆ ಹೊರಟೇಬಿಟ್ಟಳು. ನೇರವಾಗಿ ಸ್ಜೆ-ವು ಮತ್ತು ಲು-ಯಾಂಗ್‌ರಲ್ಲಿಗೆ ಹೊರಟಳು.

ಮಾರನೆ ಬೆಳಿಗ್ಗೆ ಫು-ಚುವಾನ್ ಮತ್ತು ತಾಲ್ಲೂಕು ರೈತಸಂಘದ ಕಾರ್ಯದರ್ಶಿಯೂ ನಗರಕ್ಕೆ ಪ್ರಯಾಣ ಬೆಳೆಸಿದರು ತಾಲ್ಲೂಕು ಸರ್ಕಾರವು ಇವರಿಬ್ಬರ ಪರಿಚಯವನ್ನೂ ನಗರದಲ್ಲಿ ಇವರು ಮಾಡಬೇಕಾದ ಕಾರ್ಯವನ್ನೂ ವಿವರಿಸಿತು. ನಗರದ ಜನರಕ್ಷಣ ಮಂಡಲಿಗೆ ಬರೆದ ಕಾಗದವೊಂದು ಅವರಲ್ಲಿತ್ತು. ಪೆಂಗ್-ಎರುವಿನ ಮೇಲೆ ತಾಲ್ಲೂಕು ರೈತರು ಮಾಡಿದ್ದ ಅಪಾದನೆಗಳನ್ನು ಪಟ್ಟಿ ಮಾಡಿದ್ದ ರೈತಸಂಘದ ಇನ್ನೊಂದು ಕಾಗದವೂ ಅವರಲ್ಲಿತ್ತು.

ಈಕಡೆ ಸ್ಜೆ-ವು, ಇಬ್ಬರು ಪುರಸೈನಿಕರ ನೆರವಿನಿಂದ, ಸಿಯನ್‌ನನ್ನು ಬಂಧಿಸಿ ಜಿಲ್ಲಾ ಸರ್ಕಾರದ ವಶಕ್ಕೊಪ್ಪಿಸಿದ. "ಇವನು ಸುಳ್ಳುಸುದ್ದಿಯನ್ನು ಹರಡುತ್ತಾ ತೊಂದರೆ ಕೊಡುತ್ತಿದ್ದುದರಿಂದ, ಗುಮಾನಿಯ ಮೇಲೆ ಬಂಧಿಸಿದ್ದೇವೆ. ನಮ್ಮ ಒಪ್ಪಿಗೆಯಿಲ್ಲದೆ ಜಾಮೀನಿನ ಮೇಲೆ ಬಿಡಬೇಡಿ."ಎಂದು ಜಿಲ್ಲೆಯ ಅಧ್ಯಕ್ಷನಿಗೆ ಹೇಳಿಬಂದನು.

ಸಿಯನ್‌ನ ಹೆಂಡತಿಗೆ ತುಂಬಾ ಗಾಬರಿಯಾಯಿತು. ಹಳ್ಳಿಯ ಎಂಟುಮಂದಿ 'ದೊಡ್ಡಮನುಷ್ಯ'ರಿಂದ ಜಿಲ್ಲಾಸರ್ಕಾರದ ಅಧ್ಯಕ್ಷನಿಗೆ ಕಾಗದ ಬರೆಸಿ, ಲೋ-ಚೌ-ಜೇನ್‌ನ ಕೈಲಿ ಕಳುಹಿಸಿಕೊಟ್ಟಳು. ಅವನು ಹೋಗಿ ಬರಿಕೈಯಲ್ಲಿ ಹಿಂದಿರುಗಿ ಬಂದು " ಅತ್ತಿಗೆ ಈ ಕೆಲಸ ನನ್ನಿಂದ ಸಾಧ್ಯವಿಲ್ಲ. ನಾನೂ ಹಿಂದೆ ರೈತರಿಗೆ ಹಣ ಸಾಲ ಕೊಟ್ಟು ಸ್ವಲ್ಪ ಹೆಚ್ಚಾಗಿಯೇ ಬಡ್ಡಿ ವಸೂಲು ಮಾಡುತ್ತಿದ್ದೆ. ರೈತರು ನನ್ನನ್ನು ಏನು ಮಾಡುತ್ತಾರೋ ಇನ್ನೂ ಗೊತ್ತಿಲ್ಲ'' ಎಂದು ಹೇಳಿಬಿಟ್ಟ. ಹಾಗೆಯೇ ಉಳಿದ ಏಳು ಮಂದಿಯೂ ತಮ್ಮ ಹೆಸರನ್ನು ಹಿಂತೆಗೆದುಕೊಂಡರು. ಕೊನೆಗೆ ಸಿಯನ್ ಹೆಂಡತಿಯು ತನ್ನ ಗಂಡನನ್ನು ಬಂಧಿಸಿ ಕರೆದುಕೊಂಡು ಹೋದ

ರ್ಸಿ-ವುವೇ ಕಾಪಾಡಬೇಕೆಂದು ತಿಳಿದು ಅವನ ಮನೆಗೆ ಓಡಿಬಂದು ತನ್ನ ಮನೆಯಲ್ಲೇ ಕೆಲಸಕ್ಕಿದ್ದ ಅವನ ಕಾಲಿಗೆ ಬಿದ್ದಳು. ರ್ಸಿವು ಅವಳನ್ನು ಹಿಡಿದೆಬ್ಬಿಸುತ್ತಾ, “ನೀನು ಯೂ-ಚೆನ್‌ಳನ್ನು ಕೇಳಬೇಕು” ಎಂದನು.

ಅಂದಿನ ಸಾಯಂಕಾಲದ ಸಭೆಯಲ್ಲಿ ಸಿಯನ್‌ನ ಪ್ರಶ್ನೆ ಚರ್ಚೆಗೆ ಬಂದಿತು. ಅವನು ಮೂರು ಷರತ್ತುಗಳಿಗೆ ಒಪ್ಪುವುದಾದರೆ ಬಿಡುಗಡೆ ಮಾಡಬಹುದೆಂದು ಸರ್ವಾನುಮತದಿಂದ ತೀರ್ಮಾನಿಸಿದರು. ಒಂದು, ಅವನು ಹಿಂದಿರುಗಿ ಬಂದಕೂಡಲೇ ಬಹಿರಂಗವಾಗಿ ಸಭೆಯಲ್ಲಿ ತನ್ನ ತಪ್ಪುಗಳನ್ನು ಒಪ್ಪಿಕೊಳ್ಳಬೇಕು; ಎರಡು, ಸುಳ್ಳುಸುದ್ದಿ ಹರಡುವುದಿಲ್ಲವೆಂದೂ ಭೂಸುಧಾರಣೆಯ ಕಾರ್ಯಕ್ಕೆ ಯಾವ ತರಹೆಯ ಅಡಚಣೆಯನ್ನು ತರುವುದಿಲ್ಲವೆಂದೂ ಮಾತುಕೊಡಬೇಕು; ಮೂರು, ಅವನು ಈವರೆಗೆ ಸರ್ಕಾರಕ್ಕೆ ಮೋಸಮಾಡಿರುವ ಕಂದಾಯವನ್ನೆಲ್ಲಾ ಸಲ್ಲಿಸಬೇಕು. ಯೂ-ಚೆನ್‌ಳೇ ಈ ಷರತ್ತುಗಳನ್ನು ಸೂಚಿಸಿದ್ದು.

ಮೂರು ದಿನಗಳಾದಮೇಲೆ ಸಿಯನ್‌ನ ಬಿಡುಗಡೆಯಾಯಿತು. ಅಂದಿನ ನಂಜೆಯ ಸಭೆಯಲ್ಲಿ ಅವನು ಆ ಮೂರು ಷರತ್ತುಗಳಿಗೂ ಒಪ್ಪಿ ನೆರವೇರಿಸಿದನು.

ಹೀಗಿರುವಲ್ಲಿ ಒಂದು ದಿನ ನಗರಕ್ಕೆ ಹೋಗಿದ್ದ ಫು-ಚುವಾನ್‌ನು ದಳದವರು ಪೆಂಗ್-ಎರುವನ್ನು ಹಿಡಿದು ತಂದರು. ರೈತರೆಲ್ಲರಿಗೂ ಇದು ಅತಿ ಸಂತೋಷದ ವಾರ್ತೆಯಾಗಿತ್ತು. ಫು-ಚುವಾನನಿಗಂತೂ ಹಿಡಿಸಲಾರದಷ್ಟು ಆನಂದವಾಯಿತು. ಜಿಲ್ಲಾಸರ್ಕಾರವು ಪೆಂಗ್-ಎರುವನ್ನು ತಾಲ್ಲೂಕಿನ ಕೇಂದ್ರದಲ್ಲಿ ಬಹಿರಂಗಸಭೆಯಲ್ಲಿ ವಿಚಾರಣೆಗೆ ಗುರಿಪಡಿಸಬೇಕೆಂದು ತೀರ್ಮಾನಿಸಿತು. ಅದರಂತೆ ಯು-ಲಿಯನ್, ಫು-ಚುವಾನ್‌ರನ್ನೊಳಗೊಂಡ ಎಂಟು ಜನರ ಪಂಚಾಯಿತಿಯೊಂದು ನೇಮಿಸಲ್ಪಟ್ಟಿತ್ತು. ಜಿಲ್ಲಾಸರ್ಕಾರದ ಅಧ್ಯಕ್ಷರೇ ತೀರ್ಪುಗಾರರಾದರು. ಸುತ್ತಲೂ ಕೈಯಲ್ಲಿ ಭರ್ಜಿ ಹಿಡಿದಿದ್ದ ಪುರಸೈನಿಕರ ತಂಡ ಕಾವಲಿಗಾಗಿ ನಿಂತಿದ್ದಿತು. ಹಳ್ಳಿಯ ಇಡೀ ರೈತಸಮೂಹವೇ ಅಂದು ಅಲ್ಲಿ ನೆರೆದಿದ್ದಿತು. ಮೂರು ಮಂದಿ ಜಮೀನ್ದಾರರೂ ಕರೆತರಲ್ಪಟ್ಟರು. ತಮ್ಮ ಮನೆಗಳಲ್ಲಿ ಜೀತಗಾರರಾಗಿದ್ದು, ತಮ್ಮ ಎಂಜಲುತಟ್ಟೆಗಳನ್ನು ತೊಳೆದು ಹುಕ್ಕವನ್ನು ಸಿದ್ಧಪಡಿಸಿಕೊಡುತ್ತಿದ್ದ ಆಳು

ಗಳು ಇಂದು ತಮ್ಮನ್ನು ವಿಚಾರಣೆಗೆ ಗುರಿಪಡಿಸಿರುವುದನ್ನು ಕಂಡು ಜಮೀ ನ್ದಾರರಿಗೆ ಅಸಹನೀಯ ವೇದನೆಯುಂಟಾಯಿತು. ಪ್ರತ್ಯಕ್ಷಪ್ರಮಾಣ ಗಳನ್ನು ತಮ್ಮ ಎದುರಿಗೇ ಹಿಡಿದು ತೋರಿಸಿದ್ದರಿಂದ ರೈತರು ಅವರ ಮೇಲೆ ಮಾಡಿದ್ದ ಅಪಾದನೆಗಳನ್ನು ಒಪ್ಪಿಕೊಳ್ಳಲೇಬೇಕಾಯಿತು.

ಉದಾಹರಣೆಗೆ ಪೆಂಗ್-ಟೆಂಗ್ ತಾನು ೮೦ ಚೀಲ ತಾಮ್ರದ ನಾಣ್ಯ ಗಳನ್ನು ಜಪಾನೀಯರಿಗಾಗಿ ಸಂಗ್ರಹಿಸಿದುದು ನಿಜವೆಂದು ಒಪ್ಪಿಕೊಳ್ಳಲೇ ಬೇಕಾಯಿತು. ಅದನ್ನು ಹೇರಿಕೊಂಡು ಹೋಗಿದ್ದ ಸೇವಕ ಲಿ-ಚೆನ್- ನಾನ್ ಎದುರಿಗೆ ಇರುವಾಗ ಅವನು ಹೇಗೆ ಸುಳ್ಳುಹೇಳಲು ಸಾಧ್ಯ ? ಅದೇ ರೀತಿ ಜಪಾನೀಯರ ವಿರುದ್ಧ ಹೋರಾಡುತ್ತಿದ್ದ ಇಬ್ಬರು ಯುವಕ ಗೆರಿಲ್ಲಾ ಪಡೆಯವರನ್ನು ಹಿಡಿದುಕೊಟ್ಟ ಮತ್ತೊಂದು ಮಹಾಪರಾಧವನ್ನು ಒಪ್ಪಿ ಕೊಳ್ಳಬೇಕಾಯಿತು. ಅದೇ ದೇವಸ್ಥಾನದ ಮುಂದೆಯೇ ಕ್ರೂರ ಜಪಾ ನೀಯರು ಅ ಇಬ್ಬರು ಯೋಧರ ತಲೆಗಳನ್ನು ತುಂಡರಿಸಿ ಚೆಲ್ಲಿದ್ದರು. ಅಷ್ಟೇ ಅಲ್ಲದೆ, ಪೆಂಗ್-ಟೆಂಗ್‌ನು ಜಪಾನೀಯರ ಆದೇಶದಂತೆ ಅವರಿಬ್ಬರ ತಲೆ ಗಳನ್ನೂ ಬಿದಿರು ಕಂಬಗಳ ಮೇಲೆ ಸಿಕ್ಕಿಸಿ, ಕೆರೆದಂಡೆಯ ಬಳಿ ಅವು ಕೊಳೆತು ನಾರುವವರೆಗೂ ಪ್ರದರ್ಶನಕ್ಕಿಟ್ಟಿದ್ದನು. ಇದೂ ಅಲ್ಲದೆ ದೇಶ ದ್ರೋಹಿಗಳ "ಸುಳಿ" ಎಂಬ ಸಂಸ್ಥೆಯ ಕೇಂದ್ರವು ತನ್ನ ಮನೆಯಲ್ಲಿದ್ದಿ ತೆಂದೂ ಒಪ್ಪಿಕೊಂಡನು. ಕೊನೆಯದಾಗಿ ತನ್ನ ಮನೆಯಲ್ಲಿ ಎರಡು ಪದರದ ಗೋಡೆಯ ಸಂದಿಯಲ್ಲಿ ಗುಪ್ತವಾಗಿ ಅಡಗಿಸಿಟ್ಟಿದ್ದ ಎರಡು ಬಂದೂಕಗಳು ಒಂದು ಕೋವಿ, ಐನೂರು ಮದ್ದಿನ ತೋಟಾಗಳು ಮತ್ತೂ ಒಂದು ದೊಡ್ಡ ಪೆಟ್ಟಿಗೆಯ ತುಂಬ ಇದ್ದ ಬಂಗಾರದ ಆಭಣಗಳು ಎಲ್ಲವನ್ನೂ ಒಪ್ಪಿಸಬೇ ಕಾಯಿತು.

ಲೋ-ಪೈ-ಜಂಗನು ತನ್ನ ಅಳಿಯನು ಕೋಮಿಂಟಾಂಗ್ ಸೈನ್ಯದಲ್ಲಿ ದಳವಾಯಿಯಾಗಿದ್ದುದರಿಂದ ತನಗೆ ಯಾವ ಭಯವೂ ಇಲ್ಲವೆಂದು ರೈತ ರನ್ನು ಹಿಂಸಿಸಿದೆನೆಂದೂ ಭೂಸುಧಾರಣಾದಳವು ಬರುವುದಕ್ಕೆ ಕೆಲವು ದಿನ ಗಳ ಮುಂಚೆ ಕೋಮಿಂಟಾಂಗ್ ಪಡೆಯ ಸಹಾಯವನ್ನಪೇಕ್ಷಿಸಿ ಸಮಾಚಾರ ವನ್ನು ಕಳುಹಿಸಲು ಪೆಂಗ್-ಎರುವಿಗೆ ಸಹಾಯ ಮಾಡಿದೆನೆಂದೂ ಅಪ

ಪ್ರಚಾರವನ್ನು ಸ್ವಲ್ಪಮಟ್ಟಿಗೆ ಮಾಡಿದ್ದರೂ ಉದ್ದೇಶಪೂರ್ವಕವಾಗಿ ಮಾಡಿಲ್ಲವೆಂದೂ ಒಪ್ಪಿಕೊಂಡನು.

ಪೆಂಗ್-ಎರುವು ಮೊದಮೊದಲು ತಾನು ನಿರಪರಾಧಿಯೆಂದು ಸಾಧಿಸಿದನು- "ಜನತಾಸರ್ಕಾರವು ಯಾರಿಗೂ ಅನ್ಯಾಯ ಮಾಡುವುದಿಲ್ಲವೆಂದೂ ಯಾರನ್ನೂ ವಿನಾ ಕಾರಣ ಹಿಂಸಿಸುವುದಿಲ್ಲವೆಂದೂ ಕೇಳಿದ್ದೇನೆ. ಈಗ ಏನು ಮಾಡುತ್ತದೆಂಬುದನ್ನು ಕಾದು ನೋಡೋಣ."ಎಂದು ತುಂಬ ವಿನಯವಂತನಂತೆ, ನ್ಯಾಯವಾದಿಯಂತೆ ಹೇಳಿದನು. ಆದರೆ, ಅವನ ದ್ರೋಹ ಚಟುವಟಿಕೆಗಳ ಪ್ರಮಾಣ ಒಂದೊಂದಾಗಿ ಹೊರಬಿದ್ದ ಮೇಲೆ ಅವನ ಬಣ್ಣ ಬಯಲಾಯಿತು. ಫು-ಚುವಾನ್ ತನ್ನಿಂದ ಪೆಂಗ್-ಎರುವು ಬರೆಸಿಕೊಂಡಿದ್ದ ಮೋಸದ ಪತ್ರವನ್ನು ಹೊರತೆಗೆದು ತೋರಿಸುತ್ತಾ ಈ ದೇಶದ್ರೋಹಿಯು ಹೇಗೆ ಚಿಯಾಂಗ್-ಕೈ-ಷೇಕನು ಮರಳಿ ಬರುವುದನ್ನೇ ಹಾರೈಸುತ್ತಿದ್ದಾನೆಂಬುದನ್ನು ಹೊರಗೆಡಹಿದನು. ಲೀ-ಅಜ್ಜಿಯು "ನನ್ನ ಟಿ-ಮಿಂಗ್‌ನನ್ನು ಹಿಂದಕ್ಕೆ ಕೊಡು" ಎಂದು ಕಿರಿಚಿದಳು. ಶಾಲೆಯ ಅಧ್ಯಾಪಕ ಕೋ-ಚಾಂಗ್‌ನೂ, "ನೀನೇ ಅಲ್ಲವೆ ನನ್ನ ತಂದೆಯನ್ನು ಕೊಂದಿದ್ದು. ಅವನು ಹೇಗೆ ಸತ್ತನೆಂಬುದು ಇನ್ನೂ ನನಗೆ ಗೊತ್ತಿಲ್ಲ. ಹೇಳು ನೀನು ಅವನನ್ನು ಹೇಗೆ ಕೊಂದೆ?" ಎಂದು ಕೇಳಿದನು. ಹೀಗೆ ಇನ್ನೂ ಅನೇಕರು ಅವನಮೇಲೆ ಅಪರಾಧಗಳ ಹೊರೆಯನ್ನು ಹೊರಿಸಿದರು. ಪ್ರವಾಹ ಬಂದಾಗ ಅವನು ಅಣೆಕಟ್ಟಿನ ದುರಸ್ತಿಗಾಗಿ ರೈತರಿಂದ ಸಂಗ್ರಹಿಸಿದ ಹಣವನ್ನು ದುರುಪಯೋಗಪಡಿಸಿದುದೂ ಬೆಳಕಿಗೆ ಬಂತು!

ವಿಚಾರಣೆಗೆ ಗುರಿಯಾಗಿದ್ದ ಮೂವರು ಜಮಿನ್ದಾರರಲ್ಲಿ ಇಬ್ಬರ ಕೈಗಳು ಅನೇಕ ರೈತನ ಕೊಲೆಯಿಂದ ರಕ್ತಲೇಪಿತವಾಗಿದ್ದವು! ಪೆಂಗ್-ಟಿಂಗ್ ವಿದೇಶೀಸಾಮ್ರಾಜ್ಯಶಾಹಿಗಳೊಂದಿಗೆ ಸಂಬಂಧವಿಟ್ಟುಕೊಂಡು ಅನೇಕ ರಾಷ್ಟ್ರಪ್ರೇಮಿ ಯುವಕರ ಕೊಲೆಗೆ ಕಾರಣನಾಗಿದ್ದುದಲ್ಲದೆ ಭೂಸುಧಾರಣೆಯ ಸಮಯದಲ್ಲಿ ವಿಧ್ವಂಸಕ ಕೆಲಸಗಳಿಗಾಗಿ ಮದ್ದು ಗುಂಡುಗಳನ್ನೂ ಶೇಖರಿಸಿದ್ದನು. ಪೆಂಗ್-ಎರುವು ೧೯೨೭ರ ಮಹಾಕ್ರಾಂತಿಯಲ್ಲಿ ಅನೇಕ ಕ್ರಾಂತಿಕಾರಿಗಳನ್ನು ಕೊಂದಿದ್ದನು. ಜಪಾನೀಯರ ಆಳ್ವಿಕೆಯಲ್ಲಿ

ಪ್ರಜಾಹಿಂಸಕನಾಗಿ ವರ್ತಿಸಿದ್ದಲ್ಲದೆ ಕೋಮಿಂಟಾಂಗ್‌ಗೋಸ್ಕರ ರೈತರಿಂದ ಹೆಚ್ಚು ಸುಂಕವನ್ನು ವಸೂಲಿ ಮಾಡುವುದು, ದೃಢಕಾಯರಾಗಿದ್ದವರನ್ನು ಬಲಾತ್ಕಾರದಿಂದ ಸೈನ್ಯಕ್ಕೆ ಸೇರಿಸುವುದು ಮುಂತಾದ ಹೀನಕೃತ್ಯಗಳನ್ನೆಸಗಿದ್ದನು. ಭೂಸುಧಾರಣೆಯ ಸಮಯದಲ್ಲೂ ಸುಳ್ಳುಸುದ್ದಿಗಳನ್ನು ಹಬ್ಬಿಸುತ್ತಾ ಆಯುಧ ಸಂಗ್ರಹಣೆಯಲ್ಲಿ ತೊಡಗಿದ್ದನು. ಲೋ-ಪೈ-ಜಂಗ್‌ನು ಯಾರ ಕೊಲೆಗೂ ಕಾರಣನಾಗಿರದಿದ್ದರೂ ನಿರಂಕುಶ ಪ್ರಭುವಾಗೇನೋ ವರ್ತಿಸುತ್ತಿದ್ದನು.

ಇವರ ತಪ್ಪೊಪ್ಪಿಗೆಗಳನ್ನೂ, ತನಿಖೆಯ ತೀರ್ಮಾನಗಳನ್ನೂ ಪಂಚಾಯಿತರು ಜಿಲ್ಲಾ ಜನರಕ್ಷಣಾದಳದ ಕಚೇರಿಗೆ ತಂತಿಯಮೂಲಕ ತಿಳಿಸಿದರು. ಸಾಯಂಕಾಲವೇ ಅಲ್ಲಿಂದ ಮರುತಂತಿಯು ಬಂದಿತು : " ನಿಮ್ಮ ಸಲಹೆಯಂತೆ ಲೋ-ಪೈ-ಜಂಗ್‌ನಿಗೆ ಏಳುವರ್ಷಕ್ಕೆ ಕಡಿಮೆಯಿಲ್ಲದಂತೆ ಕಾರಾಗೃಹವಾಸ, ಮತ್ತು ಪೆಂಗ್ ಸಹೋದರರಿಗೆ ಮರಣದಂಡನೆ ವಿಧಿಸುವುದು ಸೂಕ್ತವಾಗಿದೆ. ಆದರೂ ಮರಣದಂಡನೆ ವಿಧಿಸುವ ಮುನ್ನ ಮತ್ತೊಂದು ಬಹಿರಂಗ ಸಭೆಯಲ್ಲಿ ಇವರ ವಿಚಾರಣೆಯಾಗಬೇಕು. ಎಲ್ಲ ರೈತರೂ ತಮ್ಮ ಎಲ್ಲ ದೂರುಗಳನ್ನೂ ಹೇಳಿದಮೇಲೆ, ಅವರೆಲ್ಲರ ಸಮ್ಮತಿ ಪಡೆದು, ಅವರ ಕಣ್ಣೆದುರಿಗೇ ಅವರಿಬ್ಬರನ್ನೂ ಗಲ್ಲಿಗೇರಿಸಬೇಕು. ಹೀಗೆ ಮಾಡುವುದರಿಂದ ಇತರ ಜಮೀನ್ದಾರರಿಗೆ ಎಚ್ಚರಿಕೆ ಕೊಟ್ಟಹಾಗಾಗುವುದಲ್ಲದೆ, ರೈತರು ಇವರಬಗ್ಗೆ ಇನ್ನೂ ಇಟ್ಟಿರುವ ಭಯವನ್ನು ಹೋಗಲಾಡಿಸಲೂ ಸಹಕಾರಿಯಾಗುತ್ತದೆ."

* * * *

ಡಿಸೆಂಬರ್ ೧೭ರ ಬೆಳಿಗ್ಗೆ ಆಕಾಶವು ನಿರ್ಮಲವಾಗಿತ್ತು. ಹುಯಿಲುಂಗ್ ತಾಲ್ಲೂಕಿನ ಕಾಲುದಾರಿಗಳಲ್ಲಿ ಕೆಂಪುಬಾವುಟಗಳು ಹಾರಾಡುತ್ತಾ ಬರುತ್ತಿದ್ದುವು. ಹೆಂಗಸರು, ಗಂಡಸರಾದಿಯಾಗಿ ಎಲ್ಲರೂ ತಮಟೆ-ಜಾಗಟೆಗಳನ್ನು ಬಡಿದುಕೊಂಡು ಗುಂಪುಗುಂಪಾಗಿ ಪಿತೃದೇವಸ್ಥಾನದ ಬಳಿ ಬಂದು ಸೇರಿದರು. ದೇವಸ್ಥಾನದ ಆವರಣವು ಎಂದಿನಂತೆ ಅಲಂಕೃತವಾಗಿತ್ತು.

ಹೊರಗಡೆ, “ ಜನತಾ ನ್ಯಾಯಾಲಯ—ಬಹಿರಂಗ ವಿಚಾರಣಾ ಸಭೆ ” ಎಂದು ಬರೆದ ಹಲಗೆಯೊಂದು ತೂಗುಹಾಕಲ್ಪಟ್ಟಿತ್ತು.

ಹತ್ತು ಗಂಟೆಗೆ ಸರಿಯಾಗಿ ೧೬ ಜನ ಪಂಚಾಯಿತರೊಡನೆ ಜನರ ಅಭಿನಂದನೆಗಳನ್ನು ಸ್ವೀಕರಿಸುತ್ತಾ ನ್ಯಾಯಾಧಿಪತಿಯು ಬಂದನು. ತನಿಖೆಯ ಕ್ರಮವನ್ನು ಬರೆದುಕೊಳ್ಳಲು ಇಬ್ಬರು ಗುಮಾಸ್ತರಿದ್ದರು. ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಂದ ರಾಷ್ಟ್ರಗೀತೆಯಾದಮೇಲೆ, ಎಲ್ಲರೂ ಧ್ವಜ ವಂದನೆ ಸಲ್ಲಿಸಿ, ಅಧ್ಯಕ್ಷ ಮಾವೋರವರ ಚಿತ್ರಪಟಕ್ಕೆ ಗೌರವ ಸಲ್ಲಿಸಿದರು. ಅನಂತರ ಸಭೆಯ ಕಾರ್ಯಕಲಾಪಗಳು ಪ್ರಾರಂಭವಾದವು.

“ ಈದಿನ, ಹುಯಿಲುಂಗ್ ತಾಲ್ಲೂಕಿನ ಮೂರು ಅಪರಾಧಿ ಜಮೀನ್ದಾರರಬಗ್ಗೆ ತೀರ್ಪು ಕೊಡಲು ನಾವೆಲ್ಲ ಇಲ್ಲಿ ನೆರೆದಿದ್ದೇವೆ.” ಎಂದು ನ್ಯಾಯಾಧೀಶನು ಪ್ರಕಟಿಸಿದನು. ಕೈಬೇಡಿ ತೊಡಿಸಿದ ಆ ಮೂವರು ಆಪಾದಿತರೂ ಅವರಿಗಾಗಿ ಹಾಕಿದ್ದ ಮೇಜಿನಮೇಲೆ ತಲೆ ತಗ್ಗಿಸಿಕೊಂಡು ವಿಷಣ್ಣವದನರಾಗಿ ಹತ್ತಿ ನಿಂತರು. ಅವರ ಹಿಂದೆ ಪುರಸೈನ್ಯ ಸದಸ್ಯರು ಶಸ್ತ್ರಪಾಣಿಗಳಾಗಿ ಕಾವಲು ನಿಂತಿದ್ದರು.

“ ಈ ಧೂರ್ತರು ಸಿಕ್ಕಿಬಿದ್ದಿದ್ದಾರೆ. ಇವರಿಗೆ ರೆಕ್ಕೆಗಳು ಬಂದರೂ ಹಾರಿಹೋಗಲಾರರು. ನೀವು ಅವರಿಗಾಗಿ ಅಂಜದೆ, ಅವರ ದೆಸೆಯಿಂದ ನೀವು ಅನುಭವಿಸಿದ ಕೊಲೆ, ಸುಲಿಗೆ, ಮೋಸ, ಮಾನಾಪಹರಣ—ಎಲ್ಲವನ್ನೂ ವಿವರವಾಗಿ ಹೇಳಿ. ನಿಮ್ಮ ಹೇಳಿಕೆಗಳಮೇಲೆ ತೀರ್ಮಾನ ಮಾಡಲಾಗುವುದು ” ಎಂದು ಜನರನ್ನುದ್ದೇಶಿಸಿ ನ್ಯಾಯಾಧೀಶನು ಹೇಳಿದನು.

೫೦ ವರ್ಷದ ಹೆಂಗಸೊಬ್ಬಳು ಮೊಟ್ಟಮೊದಲು ವೇದಿಕೆಯನ್ನೇರಿ ನಿಂತಳು. ತನ್ನ ಎದೆಯಮೇಲೆ ಧರಿಸಿದ್ದ ಕೆಂಪು ಟೇಪಿನ ಚಿಹ್ನೆಯನ್ನು ತೋರಿಸುತ್ತಾ “ ನನ್ನ ಹೆಸರು ಪೆಂಗ್-ಷು-ಮಿನ್ ” ಎಂದಳು. ಆಕೆ ತಾಲ್ಲೂಕು ರೈತಸಂಘದ ಮೊದಲನೆಯ ಸದಸ್ಯೆ ಮತ್ತು ಹಳ್ಳಿಯ ಮಹಿಳಾ ಗುಂಪಿನ ಅಧ್ಯಕ್ಷೆಯಾಗಿದ್ದಳು. “ ನಾನು ಕೋ-ಚಾಂಗ್‌ನ ಚಿಕ್ಕಮ್ಮ. ನನ್ನ ಅಣ್ಣ ಮತ್ತು ಕೋ-ಚಾಂಗ್‌ನ ತಂದೆಯಾದ ಪೆಂಗ್-ಚಿಯಾಂಗ್‌ನ ಪರವಾಗಿ ನಾನು ಪೆಂಗ್-ಎರುವನ್ನು ಆಪಾದಿಸುತ್ತೇನೆ. ಮಂಚು ಆಳ್ವಿಕೆಯನ್ನು

೧೯೧೧ರಲ್ಲಿ ಕೊನೆಗಾಣಿಸಿದನಂತರ ೧೯೨೭ರಲ್ಲಿ ನಡೆದ ೧೬ನೆಯ ಸ್ವಾತಂತ್ರ್ಯೋತ್ಸವದ ವರ್ಷದಲ್ಲಿ ನನ್ನ ಅಣ್ಣನು ಉಪಾಧ್ಯಕ್ಷನಾಗಿದ್ದನ್ನು ಆದರೆ ಪ್ರತಿಗಾಮಿಗಳು ಹಿಂದಿರುಗಿ ಬಂದಾಗ ಅವನು ನನ್ನನ್ನೂ, ತನ್ನ ಹೆಂಡತಿ ಮತ್ತು ಮಗುವಾಗಿದ್ದ ಕೋ-ಚಾಂಗನನ್ನೂ ಕರೆದುಕೊಂಡು ಬೆಟ್ಟದ ತಪ್ಪಲಿಗೆ ಓಡಿಹೋಗಿ, ಅಲ್ಲಿ ಕೆಂಪು ಸೈನ್ಯವನ್ನು ಸೇರಿದ. ನನ್ನ ವೃದ್ಧ ತಂದೆಯೊಬ್ಬರೇ ಮನೆಯಲ್ಲಿ ಉಳಿದರು.

(೧೯೧೧ರಲ್ಲಿ ನಡೆದ ಕ್ರಾಂತಿ, ಮಂಚು ಆಳ್ವಿಕೆಯ ವಿರುದ್ಧ ಹೊಡಿದುದು. ಸನ್‌ಯಾತ್‌ಸೇನ್‌ರ ನೇತೃತ್ವದಲ್ಲಿ ದೇಶದ ಎಲ್ಲ ಶಕ್ತಿಗಳೂ ಒಂದಾಗಿ ನಡೆಸಿದ ಈ ಹೋರಾಟ ಯಶಸ್ವಿಯಾಗಿ ಕೊನೆಗೊಂಡಿತು. ಆದರೆ ಸ್ವಲ್ಪ ಕಾಲದನಂತರ, ಚಿಯಾಂಗ್ ಕೈ ಷೇಕನ ದೇಶದ್ರೋಹ ನೀತಿಯಿಂದಾಗಿ ಕಮ್ಯೂನಿಸ್ಟ್ ಪಕ್ಷವು ಕೊಮಿಂಟಾಂಗ್‌ನಿಂದ ಬೇರ್ಪಟ್ಟಿತು. ೧೯೨೭ರಿಂದ ಚಿಯಾಂಗನ ಕೈ ಮೇಲಾಗಿ, ಜನರು ತುಂಬಾ ಕಷ್ಟವನ್ನನುಭವಿಸಬೇಕಾಯಿತು.)

" ಪೆಂಗ್-ಎರುವು ನಮ್ಮ ಮನೆಯನ್ನು ವಿದ್ರೋಹಿಗಳ ಬಿಡಾರವನ್ನಾಗಿ ಮಾಡಿಕೊಟ್ಟ. ಮನೆಯಲ್ಲಿದ್ದುದನ್ನೆಲ್ಲಾ ಲೂಟಿ ಮಾಡಿದಮೇಲೆ ಅವರು ನನ್ನ ತಂದೆಯನ್ನು ಸಿಕ್ಕಾಪಟ್ಟೆ ಹೊಡೆದು, ಬಡಿದು, ರೈತಸಂಘದ ಸದಸ್ಯರ ನೆಲೆಯನ್ನು ತಿಳಿಸುವಂತೆ ಒತ್ತಾಯಪಡಿಸಿದರು. ೮೦ ವರ್ಷದ ಮುದುಕನಾದ ನನ್ನ ತಂದೆಯು ಗುಟ್ಟನ್ನು ಬಿಟ್ಟುಕೊಡದೇ, ಹೊಡೆತದ ನೋವಿನಲ್ಲೇ ಮೃತರಾದರು— (ಉಕ್ಕಿ ಬಂದ ಕೋಪವನ್ನು ತಡೆಹಿಡಿಯಲಾಗದೆ, ಅವಳು ಪೆಂಗ್-ಎರುವಿನ ಕೆನ್ನೆಗೆ ಬಲವಾಗಿ ಹೊಡೆದಳು).—

" ಆ ವರ್ಷದ ಕೊನೆಯಲ್ಲಿ ತಂದೆಯನ್ನು ಕಾಣಬೇಕೆಂದು ಮರೆಮಾಚಿಕೊಂಡು ಹೋದ ನನ್ನ ಅಣ್ಣನನ್ನು ಪೆಂಗ್-ಎರುವು ಹೇಗೋ ಪತ್ತೆ ಹಚ್ಚಿ, ಚೂರಿಯಿಂದ ಮೈತುಂಬ ಗಾಯಮಾಡಿ ಕೊಂದುಹಾಕಿದ. ಅವನ ಮೃತದೇಹವನ್ನು ಕೆಲವು ಹಳ್ಳಿಯವರು ಹುಲ್ಲಿನ ಗಾಡಿಯಲ್ಲಿ ಮುಚ್ಚಿ ನಮಗೆ ತಲುಪಿಸಿದರು. ಉಗುರಿನ ತಳಭಾಗದಲ್ಲಿ ಸಿಬಿರಿನಿಂದ ಚುಚ್ಚಿ

ಮಾಡಿದ ಗಾಯಗಳಿಂದ ಅವನ ಹತ್ತು ಬೆರಳುಗಳೂ ಊದಿದ್ದವು. ಅವನ ಹಲ್ಲುಗಳನ್ನೆಲ್ಲಾ ಜಜ್ಜಿ ಕಿತ್ತುಹಾಕಿದ್ದರು."

ಪೆಂಗ್-ಷು-ಮಿನ್‌ಗೆ ಇನ್ನು ಮುಂದುವರೆಸಲಾಗಲಿಲ್ಲ. ಕೋಪದಿಂದ ಕಾದ ಅವಳ ಮುಖದಲ್ಲಿ ಉಸಿರು ಹೊಗೆಯಾಡುತ್ತಿದ್ದಂತೆ ಕಾಣುತ್ತಿತ್ತು. ಅವಳ ದಾರುಣಕಥೆಯನ್ನು ಕೇಳಿದ ಎಲ್ಲರ ಕಣ್ಣಲ್ಲೂ ನೀರು ದಳದಳನೆ ಸುರಿಯುತ್ತಿತ್ತು. "ದ್ರೋಹಿ ಜಮೀನ್ದಾರರ ನಾಶವಾಗಲಿ!" "ಪೆಂಗ್-ಎರುವನ್ನು ಗಲ್ಲಿಗೇರಿಸಿ" ಎಂದು ಜನ ಕೂಗಿದರು.

ಪೆಂಗ್-ಷು-ಮಿನ್‌ಳಿಗೆ ಉಸಿರುಕಟ್ಟಿತು. ಮಾತು ಹೊರಡಲಿಲ್ಲ. ಕೊನೆಗೆ ಇಷ್ಟುಮಾತ್ರ ಹೇಳಿದಳು: "ಸಾಧಾರಣವಾಗಿ ನನಗೆ ಒಂದು ಕೋಳಿಮರಿಯನ್ನು ಕೊಲ್ಲಲೂ ಭಯವಾಗುತ್ತದೆ. ಆದರೆ, ಈಗ ಪೆಂಗ್-ಎರುವನ್ನು ಬರಿಗೈಯಿಂದಲೇ ಗುದ್ದಿ ಸಾಯಿಸಲೇ ಎನಿಸುತ್ತಿದೆ."

ಇದಾದಮೇಲೆ ಒಬ್ಬ ಯುವಕರೈತನು ಮುಂದೆ ಬಂದು, ಜಮೀನ್ದಾರ ಪೆಂಗ್-ಟಿಂಗ್‌ನು ತನ್ನ ತಂದೆಯನ್ನು ಕೊಲ್ಲಿಸಿದ ಬಗೆ ಮತ್ತು ಅವರನ್ನು ಹಿಂಸಿಸಿದ ರೀತಿಯನ್ನು ವಿವರಿಸಿ, ಅವನಿಗೆ ಮರಣದಂಡನೆಯನ್ನುವಿಧಿಸಲೇ ಬೇಕೆಂದನು. ಸಭಿಕರೆಲ್ಲರೂ ತಮ್ಮ ಮುಷ್ಟಿಗಳನ್ನು ಮೇಲಕ್ಕೆತ್ತಿ ಘೋಷಿಸಿದರು: "ದ್ರೋಹಿ ಜಮೀನ್ದಾರನನ್ನು ತೊಲಗಿಸಿ", "ಪ್ರತಿಗಾಮಿ ಅಧಿಕಾರ ಅಳಿಯಲಿ", "ಪ್ರಾಣಕ್ಕೆ ಪ್ರಾಣ ತೆರಬೇಕು."

ಫು.ಚುವಾನ್ ಮತ್ತು ಲೀ ಅಜ್ಜಿಯು ಮಾತನಾಡಿದಾಗ ಜನರು ಇನ್ನೂ ಕೆರಳಿದರು.

ಲೋ-ಯುಂಗ್-ನೀನ್ ಎಂಬ ಇನ್ನೊಬ್ಬ ರೈತ ಮುಂದೆ ಬಂದು, "ನಾನು ಜಮೀನ್ದಾರ ಲೋ-ಪೈ-ಜಂಗ್‌ನ ಸೋದರಳಿಯ. ಅವನು ಹಿಂದೊಮ್ಮೆ ಕೆಲವು ರೈತರ ಸಾಲಪತ್ರಗಳನ್ನು ನನ್ನ ಕೈಗಿತ್ತು, ಕಳೆದು ಹೋದರೆ ನಕಲು ಇರಲೆಂದು ಅವುಗಳ ಫೋಟೋ ತೆಗೆಸಿಕೊಂಡುಬರುವಂತೆ ಹೇಳಿದ್ದ. ಅಲ್ಲದೆ ಎರಡು ಪೆಟ್ಟಿಗೆಗಳ ತುಂಬ ಏನೋ ಸಾಮಾನು ತುಂಬಿ ನನ್ನ ಮನೆಯಲ್ಲಿಟ್ಟಿದ್ದ. ಆಗ, ನಮ್ಮ ಚಿಕ್ಕಪ್ಪನಲ್ಲವೇ ಎಂದು ಒಪ್ಪಿಕೊಂಡೆ. ಎಷ್ಟಾದರೂ ಅವನು ಜಮೀನ್ದಾರ ಮತ್ತು ನಾನು ಬಡರೈತನೇ

ಎಂಬುದು ಈಗ ನನಗರಿವಾಗಿದೆ. ಅವನ ಮನೆಯಲ್ಲಿ ಮೀನು, ಮಾಂಸದ ನಾನಾತರಹೆಯ ಭಕ್ಷಭೋಜ್ಯಗಳಿರುತ್ತಿದ್ದರೆ, ನಮಗೆ ಕೊಳೆತ ಆಲೂ ಗೆಡ್ಡೆಯು ಸಿಗುವುದೂ ಕಷ್ಟವಾಗಿತ್ತು. ಅವನ ಪೆಟ್ಟಿಗೆಗಳೆರಡನ್ನೂ ತಾಲ್ಲೂಕು ಸರ್ಕಾರಕ್ಕೆ ಒಪ್ಪಿಸುವೆನು" ಎಂದನು. ಜನರು ಪುನಃ "ಆಸ್ತಿಯನ್ನು ಮುಚ್ಚಿಟ್ಟು ದ್ರೋಹಬಗೆಯುವ ಜಮೀನ್ದಾರರ ಅಳಿವಾಗಲಿ", "ರೈತರ ಐಕ್ಯತೆ ಚಿರಾಯುವಾಗಲಿ" ಎಂದು ಘೋಷಿಸಿದರು.

ಅಷ್ಟುಹೊತ್ತಿಗೆ ಮಳೆ ಸುರಿಯಲು ಪ್ರಾರಂಭಿಸಿತು. ಆದರೂ ಜನರು ಸ್ವಲ್ಪವೂ ಕದಲಲಿಲ್ಲ. ಒಬ್ಬ ಹೆಂಗಸು ಕಣ್ಣೀರು ಸುರಿಸುತ್ತಾ ಮುಂದೆ ಬಂದು, ಪೆಂಗ್-ಎರುವು ಹೇಗೆ ತನ್ನ ೧೪ ವರ್ಷದ ಮಗಳ ಮಾನಾಪಹರಣ ಮಾಡಿದನೆಂಬುದನ್ನು ಹೇಳಿದಳು. ಜನರ ಕೋಲಾಹಲವು ಹೆಚ್ಚಾಯಿತು. "ಪೆಂಗ್ ಸಹೋದರರನ್ನು ಗುಂಡಿಟ್ಟು ಕೊಲ್ಲಿ, ಲೋ-ಪೈ-ಜಂಗ್‌ನನ್ನು ಸೆರೆಯಲ್ಲಿಡಿ" ಎಂಬ ಕೂಗು ಎಲ್ಲೆಲ್ಲೂ ಕೇಳಿಬರುತ್ತಿತ್ತು.

ಸುಮಾರು ೪ ಘಂಟೆಯ ಹೊತ್ತಿಗೆ, ೨೦ಕ್ಕೂ ಹೆಚ್ಚು ಮಂದಿ ರೈತರು ತಮ್ಮ ಅಹವಾಲುಗಳನ್ನು ಹೇಳಿಕೊಂಡಿದ್ದರು. ಜನರ ಉದ್ವೇಗವೂ ಕುದಿ ಯುವ ಮಟ್ಟಕ್ಕೇರಿತ್ತು. ಪಂಚಾಯಿತಿದಾರರೂ ಮತ್ತು ನ್ಯಾಯಾಧಿ ಪತಿಯೂ ಪರಸ್ಪರ ಆಲೋಚನೆಗಾಗಿ ದೇವಸ್ಥಾನದ ಒಳಗೆ ಹೋಗಿಬಂದರು. ನ್ಯಾಯಾಧೀಶನು ತೀರ್ಮಾನವನ್ನು ಹೇಳಲು ನಿಂತನು. ಜನರು ಕುತೂ ಹಲದಿಂದ ನಿಶ್ಶಬ್ದರಾದರು. ಆಪಾದಿತ ಜಮೀನ್ದಾರರೂ ಬಿಗಿಮುಖದಿಂದ ಕಿವಿಯಾನಿಸಿ ಕೇಳಲನುವಾದರು.

"ರೈತಬಂಧುಗಳೇ! ಜಮೀನ್ದಾರರು ಹೇಗೆ ದೇಶದ್ರೋಹಿಗಳಾಗಿ ಸಾಮ್ರಾಜ್ಯಶಾಹಿಯ ಕೈಗೊಂಬೆಗಳಾಗಿದ್ದಾರೆಂದು ನಿಮ್ಮ ಸಪ್ರಮಾಣ ಹೇಳಿಕೆಗಳ ಮೂಲಕ ಗೊತ್ತಾಗಿದೆ. ಇವರು, ಜಪಾನೀಯರ, ಕೋಮಿಂ ಟಾಂಗಿನ ಮತ್ತು ಅಮೆರಿಕನ್ ಸಾಮ್ರಾಜ್ಯಶಾಹಿಯ ಪರವಹಿಸಿ ರಾಷ್ಟ್ರ ದ್ರೋಹವೆಸಗಿದ್ದಾರೆ.

"ಲೋ-ಪೈ-ಜಂಗ್‌ನು ಸುಳ್ಳುಸುದ್ದಿಗಳನ್ನು ಹರಡುತ್ತಿದ್ದನು; ಆಸ್ತಿ ಯನ್ನು ಬಚ್ಚಿಟ್ಟು ಮೋಸಮಾಡುತ್ತಿದ್ದನು; ಕೋಮಿಂಟಾಂಗ್‌ನ ಬರವನ್ನೇ

ಇದಿರುನೋಡುತ್ತಿದ್ದನು—ಎಂಬ ಆಪಾದನೆಗಳಿಗಾಗಿ ನಾವು ಅವನಿಗೆ ೭ ವರ್ಷ ಕಠಿಣಶಿಕ್ಷೆ ವಿಧಿಸಬೇಕೆಂದು ತೀರ್ಮಾನಿಸಿದ್ದೇವೆ. ಇದು ನಿಮಗೆಲ್ಲ ಒಪ್ಪಿಗೆಯೇ ?"

ಎಲ್ಲರೂ ಸಂತೋಷದಿಂದ 'ಒಪ್ಪಿಗೆ' ಎಂದು ಕೂಗಿದರು.

" ಪೆಂಗ್-ಟೆಂಗ್, ಅನೇಕ ದೇಶಪ್ರೇಮಿ ಯುವಕರ ಸಾವಿಗೆ ಕಾರಣ ನಾಗಿದ್ದಾನೆ. ಜನರನ್ನು ಮೋಸಗೊಳಿಸಲು, ಸುಳ್ಳು ಸಮಾಚಾರಗಳನ್ನು ಹರಡುವ ಸಂಸ್ಥೆಗೆ ಪೋಷಕನಾಗಿದ್ದನು. ದೇಶದಲ್ಲಿ ದಂಗೆ ಎಬ್ಬಿಸುವ ಸಲುವಾಗಿ ಮದ್ದು ಗುಂಡುಗಳನ್ನು ಬಚ್ಚಿಟ್ಟಿದ್ದನು. ಇವುಗಳಿಗಾಗಿ ಅವನಿಗೆ ಮರಣದಂಡನೆಯನ್ನು ವಿಧಿಸಿದ್ದೇವೆ. ನಿಮ್ಮ ಅಭಿಪ್ರಾಯವೇನು ?"

ಆಗಬಹುದೆಂದು ಪ್ರತ್ಯುತ್ತರವಾಗಿ ಬಂದ ಶಬ್ದ ಕಿವುಡು ಮಾಡು ವಂತಿತ್ತು.

"ಪೆಂಗ್-ಎರುವು, ಕಮ್ಯೂನಿಸ್ಟ್ ವಿರೋಧಿ ಗುಂಪಿನ ನಾಯಕನಾಗಿ, ಅನೇಕ ಸಂಘಟನೆಗಳನ್ನು ಮುರಿದುದಲ್ಲದೆ, ರೈತನಾಯಕರ ರಕ್ತದಿಂದ ನೆಲ ವನ್ನು ತೋಯಿಸಿದ್ದಾನೆ. ಹಳ್ಳಿಯ ಅಧ್ಯಕ್ಷನಾಗಿದ್ದಾಗ, ರೈತರಿಂದ ಹೇರಳ ವಾಗಿ ತೆರಿಗೆ ವಸೂಲಾದ್ದಿ, ಕೋಮಿಂಟಾಂಗ್ ಸೈನ್ಯಕ್ಕೆ ಬಲಾತ್ಕಾರದಿಂದ ರೈತಯುವಕರನ್ನು ಸೇರಿಸಿದ್ದಾನೆ. ಇದಲ್ಲದೆ ಗ್ರಾಮದ ಹಣವನ್ನು ದುರುಪ ಯೋಗಪಡಿಸಿದ್ದಾನೆ. ಆದ್ದರಿಂದ ಇವನಿಗೂ ಮರಣದಂಡನೆ ವಿಧಿಸಲ್ಪಟ್ಟಿದೆ. ಇದಕ್ಕೆ ನಿಮ್ಮ ಸಮ್ಮತಿ ಇದೆಯೇ ?"

ರೈತರು ಮತ್ತಷ್ಟು ಉತ್ಸಾಹದಿಂದ ಕೂಗುತ್ತಾ ಸಮ್ಮತಿಯನ್ನು ಸೂಚಿ ಸಿದರು. ಪುರಸೈನ್ಯದವರು ಭರ್ಜಿಗಳನ್ನು ಮೇಲಕ್ಕೆ ಎತ್ತಿಹಿಡಿದು, " ದೈತ್ಯ ಜಮೀನ್ದಾರಿವರ್ಗ ನಿರ್ಮೂಲವಾಗಲಿ ; ರೈತರ ಹೋರಾಟಕ್ಕೆ ಬೆಂಬಲವೀಯುವ ಜನತಾಸರ್ಕಾರ ಚಿರಾಯುವಾಗಲಿ" ಎಂದು ಕೂಗಿದರು.

ಪೆಂಗ್-ಟೆಂಗ್ ಮತ್ತು ಪೆಂಗ್-ಎರುವನ್ನು ಸ್ಮಶಾನಾಭಿಮುಖವಾಗಿ ಕರೆದುಕೊಂಡು ಹೊರಟರು. ಅವರ ಕಣ್ಣುಗಳು ಕಾಂತಿಹೀನವಾಗಿದ್ದು, ಮುಖದಲ್ಲಿ ಆಗಲೇ ಪ್ರೇತಕಳೆ ತಾಂಡವಾಡುತ್ತಿತ್ತು. ದಾರಿಯುದ್ದಕ್ಕೂ, ರೈತರು ಅವರನ್ನು ಹೊಡೆಯುವುದಕ್ಕಾಗಿ ಕಾದು ನಿಂತಿದ್ದರು. ಆದರೆ

ರಕ್ಷಣಾದಳದವರು ತಡೆದದ್ದರಿಂದ ಅವರಿಗೆ ಹೆಚ್ಚು ಪೆಟ್ಟು ಬೀಳಲಿಲ್ಲ. ಆದರೂ ಲೀ ಅಜ್ಜಿಯು ಗುಂಪಿನಿಂದ ಕಷ್ಟಪಟ್ಟುಕೊಂಡು ಮುಂದೆ ಬಂದು ಪೆಂಗ್-ಎರುವಿನ್ನು ತನ್ನ ಮೂಳೆಯ ಮುಷ್ಠಿಯಿಂದಲೇ ಗುದ್ದಿದಳು. ಬೋನಿನಲ್ಲಿ ಸಿಕ್ಕಿಬಿದ್ದ ಕಾಡುಮೃಗದಂತೆ ಪೆಂಗ್-ಎರು ಹಲ್ಲು ಕಿರಿಯುತ್ತಾ ಲೀ ಅಜ್ಜಿಯನ್ನು ನುಂಗಿಬಿಡುವಂತೆ ದುರುಗುಟ್ಟಿಕೊಂಡು ನೋಡಿದ. ಮಳೆ ಧಾರಾಕಾರವಾಗಿ ಸುರಿಯುತ್ತಿದ್ದರೂ, ಎಲ್ಲರೂ ರುದ್ರಭೂಮಿಗೆ ಹಿಂಬಾಲಿಸಿದರು. ಸ್ವಲ್ಪ ಹೊತ್ತಿನಮೇಲೆ ೮–೯ ಬಾರಿ ಗುಂಡು ಹಾರಿಸಿದ ಶಬ್ದ ಕೇಳಿ ಬಂತು. ಜನರು ತಮ್ಮ ಮಧ್ಯೆ ತಲೆಮರೆಸಿಕೊಂಡಿದ್ದ ವಿಷಸರ್ಪಗಳು ಸತ್ತವೆಂದು ದೊಡ್ಡದಾಗಿ ಉಸಿರುಬಿಟ್ಟರು. ನಿರ್ಭಯವಾಗಿ, ನಿರಾತಂಕವಾಗಿ ಆಕಾಶದಲ್ಲಿ ಘೋಷಣೆಗಳನ್ನು ಮೊಳಗಿಸಿದರು.

"ಪ್ರತಿಗಾಮಿ ಜಮೀನ್ದಾರವರ್ಗ ನಿರ್ಮೂಲವಾಗಲಿ !" ; "ರೈತರ ಬಂಧವಿಮೋಚನೆ ಚಿರಾಯುವಾಗಲಿ!" ; "ಕಮ್ಯೂನಿಸ್ಟ್ ಪಾರ್ಟಿ ದೀರ್ಘಕಾಲ ಬಾಳಲಿ !" ; "ಅಧ್ಯಕ್ಷ ಮಾವೋ-ಟ್ಸೆ-ಟುಂಗ್ ದೀರ್ಘಾಯುವಾಗಲಿ !"

# ಕೆಂಪು, ಹಳದಿ ಮತ್ತು ಬಿಳುಪು

ರಾತ್ರಿಯ ಕಪ್ಪು ಹೆಚ್ಚಾಗುತ್ತಿದ್ದಹಾಗೇ, ಮಳೆಯೂ ನಿಧಾನವಾಗಿ ನಿಂತಿತು.

ಮಾರನೆಯ ಬೆಳಿಗ್ಗೆ ಸೂರ್ಯನನ್ನು, ನವಚೇತನದಿಂದ ತುಂಬಿದ ಹುಯಿಲುಂಗ್ ತಾಲ್ಲೂಕು ಎದುರುಗೊಂಡಿತು. ಪ್ರಶಾಂತತೆಯಿಂದ ಹರಿಯುತ್ತಿದ್ದ ಪಿರ್ಜ ನದಿಯ ಇಬ್ಭಾಗದಲ್ಲೂ ಹುಲುಸಾಗಿ ಬೆಳೆದ ಪಚ್ಚೆ ಹಸುರಿನ ಎಲೆಗಳು, ಹೊಂಬಣ್ಣದ ಸೂರ್ಯ ರಶ್ಮಿಯಿಂದ ಮಿಂಚುತ್ತಿದ್ದ ಹನಿಮುತ್ತುಗಳಿಂದ ತುಂಬಿ, ಜೋಲಾಡುತ್ತಿದ್ದವು. ಟೆಲಿಫೋನ್ ತಂತಿಗಳು ಸುಮಧುರ ಸುಪ್ರಭಾತವನ್ನು ಹಾಡುತ್ತಿದ್ದವು.

ಹೊಲದಲ್ಲಿ ಕೆಲಸಮಾಡುತ್ತಿದ್ದ ರೈತರು ಆಗಾಗ್ಗೆ ಕತ್ತೆತ್ತಿ ರುದ್ರ ಭೂಮಿಯತ್ತ, ತಮ್ಮನ್ನು ಕಾಡುತ್ತಿದ್ದ ಜಮೀನ್ದಾರರು ವಿನಾಶ ಹೊಂದಿದ ರಲ್ಲಾ ಎಂಬ ಸಂತೃಪ್ತದೃಷ್ಟಿಯಿಂದ ನೋಡುತ್ತಿದ್ದರು. ಸಾವಿರಾರು ವರ್ಷ ಗಳಿಂದ, ಜಮೀನ್ದಾರರಿಂದ ಮರುಮಾತಾಡದೆ ಒದೆ ತಿನ್ನುವುದು ಮತ್ತು ಬೈಸಿಕೊಳ್ಳುವುದು, ಫು-ಚುವಾನ್ ಮತ್ತು ಲೀ-ಅಜ್ಜಿಯಂತಹವರ ಜೀವನದ ಶಾಶ್ವತ ನಿಯಮವಾಗಿ ಹೋಗಿತ್ತು. ಆದರೆ ಜನತೆಯ ನ್ಯಾಯದಂಡಕ್ಕೆ ಜಮೀನ್ದಾರರು ಕೊನೆಗೂ ತಲೆಬಾಗಿಸಿ ಸಾವನ್ನಪ್ಪಿದುದು, ರೈತರಲ್ಲಿದ್ದ ಹೆದರಿಕೆಯನ್ನೆಲ್ಲಾ ಹೊಡೆದೋಡಿಸಿತ್ತು; ಆತ್ಮವಿಶ್ವಾಸವನ್ನೂ ತುಂಬಿತು.

ಅಂದು ಡಿಸೆಂಬರ್ ೧೮. ಲು-ಯಾಂಗ್‌ನೇ ಎಲ್ಲ ರೈತರ ಮನೆಗೂ ಹೋಗಿಬರುವುದಕ್ಕೆ ಬದಲಾಗಿ, ರೈತರೇ ಅವನಲ್ಲಿಗೆ ಬರತೊಡಗಿದರು. ಒಬ್ಬೊಬ್ಬರೂ, ಜಮೀನ್ದಾರರು ಅಡಗಿಸಿಟ್ಟಿದ್ದ ತಾಮ್ರದ ತಂತಿಯ ಸುರುಳಿ, ಪೆಟ್ಟಿಗೆ-ಗಂಟುಗಳನ್ನು ಹೊತ್ತುಕೊಂಡು ಬಂದು ಗುಪ್ಪೆಹಾಕಿದರು. ಲು-ಯಾಂಗ್‌ನು ಇವೆಲ್ಲದಕ್ಕಿಂತ ಅತಿಮುಖ್ಯವಾದ, ಪುರಸೈನ್ಯಕ್ಕೆ ಹೆಚ್ಚು ಸದಸ್ಯರನ್ನು ಕೂಡಿಸುವ ಕೆಲಸದಲ್ಲಿ ನಿರತನಾದನು. ಅನೇಕ ಮಹಿಳೆಯರೂ ಸೇರಲು ಮುಂದೆ ಬಂದರು. ಯೂ-ಚಿನ್‌ಳೂ, ಅವಳ ಅತ್ತೆಯನ್ನೊಪ್ಪಿಸಿ, ಸದಸ್ಯಳಾದಳು. ಚುನ್-ಸಿಂಗ್‌ಳು ಪುರಸೈನ್ಯ ಸೇರಿದಳೆಂದು

ತಿಳಿದಾಗ, ಲೋ-ಮನೆತನದವರು, ಬಾಲ್ಯವಿವಾಹದಿಂದಾಗಿ ಅವಳು ತಮ್ಮ ಅಧೀನಳೆಂದೂ, ತಮ್ಮ ಅನುಮತಿಯಿಲ್ಲದೆ ಹೊರಗೆ ಹೋಗಲಾರಳೆಂದೂ ವಾದಿಸಿದರು. "ನಿಮ್ಮ ಮನೆಯಲ್ಲಿ ಉಂಡಿದ್ದಕ್ಕೆ ನಿಮಗೆ ಹಣ ಕೊಡಬೇಕೆ? ಆಗಲಿ. ನೀವು ಮೊದಲು ನನ್ನ ದುಡಿತದ ೫ ವರ್ಷಗಳ ವೇತನವನ್ನು ಕೊಡಿ."ಎಂದು ಚುನ್‌ಸಿಂಗ್ ಪ್ರತಿಸವಾಲು ಹಾಕಿದಳು. ಮೊದಮೊದಲು ದಾವ ಹಾಕುವುದಾಗಿ ಹೇಳುತ್ತಿದ್ದ ಲೋ-ಕುಟುಂಬದವರು, ತಮಗೆ ತಾವೇ ಸುಮ್ಮನಾದರು.

ಪುರಸೈನ್ಯದ ಸದಸ್ಯರೆಲ್ಲಾ ತುಂಬ ಉತ್ಸಾಹದಿಂದ ಹಳ್ಳಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾ, ಜಮೀನ್ದಾರರ ಚಟುವಟಿಕೆಗಳ ಬಗ್ಗೆ ಜಾಗರೂಕರಾಗಿದ್ದರು. ತಮ್ಮ ವಿರಾಮ ಸಮಯದಲ್ಲಿ ಶಾಲೆಗೆ ಹೋಗಿ, ಭೂಸುಧಾರಣೆಯು ಸುಸೂತ್ರವಾಗಿ ನಡೆಯಲು ಅತ್ಯವಶ್ಯಕವಾದ ಓದು-ಬರೆಹವನ್ನು ಕಲಿಯಲು ಪ್ರಾರಂಭಿಸಿದರು.

ರಾತ್ರಿಶಾಲೆಗಳಲ್ಲಿ ಲು-ಯಾಂಗ್‌ನು ವರ್ಗ ವಿಭಜನೆಯ ರೀತಿಯನ್ನು ಅದರ ಉದ್ದೇಶವನ್ನೂ ವಿವರಿಸಿದನು. ವರ್ಗವಿಭಜನೆಯಿಂದ, ಯಾರು ರೈತರು, ಯಾರು ಜಮೀನ್ದಾರರು ಎಂದು ತಿಳಿಯುವುದಷ್ಟೇ ಅಲ್ಲದೆ, ಯಾರು, ಮಿತ್ರರು ಯಾರು ಶತ್ರುಗಳು ಎಂಬುದೂ ತಿಳಿಯುತ್ತದೆ. ಸಮಾಜದ ಪುನರುದ್ಧಾರದಲ್ಲಿ ವರ್ಗವಿನ್ಯಾಸದ ತಿಳುವಳಿಕೆಯ ಅಗತ್ಯವನ್ನು ಒತ್ತಿಹೇಳುತ್ತಾ, ವಿವರಗಳ ಗೊಂದಲಕ್ಕೆ ಹೋಗದೆ ಮುಖ್ಯ ವಿಷಯಗಳನ್ನು ಮಾತ್ರ, ಲು-ಯಾಂಗ್‌ನು ರೈತರ ಮುಂದಿಟ್ಟನು : ಉಳುಮೆಯ ಕೆಲಸದಲ್ಲಿ ತಾನೂ ಭಾಗವಹಿಸುತ್ತಾನಾದ್ದರಿಂದ, ಶ್ರೀಮಂತ ರೈತನು ಜಮೀನ್ದಾರನೆನಿಸಿಕೊಳ್ಳುವುದಿಲ್ಲ. ಪರಶೋಷಣೆಯಿಂದ ಬರುವ ಸಂಪಾದನವು ಒಟ್ಟು ವರಮಾನದ ಶೇ. 25ಕ್ಕೂ ಹೆಚ್ಚಾಗಿದ್ದರೆ, ಅಂಥವನನ್ನು ಶ್ರೀಮಂತ ರೈತನೆಂದು ಪರಿಗಣಿಸಬಹುದು. ಮಧ್ಯಮ ವರ್ಗದ ರೈತರು ಸಾಮಾನ್ಯವಾಗಿ ತಮ್ಮ ದುಡಿಮೆಯಿಂದಲೇ ಜೀವನ ನಡೆಸುವವರು. ಪರರಿಗಾಗಿ ಅವರು ದುಡಿಯುವುದಿಲ್ಲ. ತಮ್ಮ ಒಟ್ಟು ವರಮಾನದ ಶೇ. 25ಕ್ಕೂ



ರಾತ್ರಿ ಶಾಲೆಗಳಲ್ಲಿ ಲುಯಾಂಗನು ವರ್ಗವಿಭಜನೆಯ ರೀತಿ-ಉದ್ದೇಶಗಳನ್ನು ವಿವರಿಸಿದನು

ಕಡಿಮೆ ಆದಾಯವನ್ನು ಪರಶೋಷಣೆಯಿಂದ ಗಳಿಸುವವರನ್ನು ಅನುಕೂಲಸ್ಥಮಧ್ಯಮ ರೈತರೆಂದು ವಿಂಗಡಿಸಬಹುದು. ತಮ್ಮ ಜಮೀನುಗಳನ್ನು ತಾವೇ ಉಳುವುದಲ್ಲದೆ, ಜೀವನಾಧಾರಕ್ಕೆ ಸಾಲದೆ ಪರರ ಜಮೀನುಗಳಲ್ಲಿ ಕೂಲಿ ಕೆಲಸಕ್ಕೂ ಹೋಗುವವರು ಬಡ ರೈತರು, ಜಮೀನಾಗಲೀ, ವ್ಯವಸಾಯೋಪಕರಣಗಳಾಗಲೀ ಇಲ್ಲದೆ, ಇತರರಿಗೆ ತಮ್ಮ ಶ್ರಮಶಕ್ತಿಯನ್ನು ಮಾರುವುದರಿಂದಲೇ ಜೀವನ ನಡೆಸುವವರು ವ್ಯವಸಾಯ ಕೂಲಿಗಳೆನಿಸಿಕೊಳ್ಳುವರು.

ಈ ವಿವರಣೆಯನ್ನು ಕೇಳಿದನಂತರ, ಹಳ್ಳಿಯ ಅಧ್ಯಕ್ಷ ಮತ್ತು ರೈತ ಸಂಘದ ಅಧ್ಯಕ್ಷರ ನೇತೃತ್ವದಲ್ಲಿ ಎಲ್ಲರೂ, ಆ ಹಳ್ಳಿಯಲ್ಲಿ ಜಮೀನ್ದಾರರು, ಶ್ರೀಮಂತ ರೈತರು, ಮಧ್ಯಮ ರೈತರು, ಬಡರೈತರು, ಮತ್ತು ವ್ಯವಸಾಯ ಕೂಲಿಗಳು ಯಾರು ಯಾರೆಂದು ವರ್ಗವಿಂಗಡಣೆ ಮಾಡಲು ತೊಡಗಿದರು. ಹೀಗೆ ಮಾಡುವಾಗ, ಈ ಸಮಸ್ಯೆಗೆ ಸಂಬಂಧಿಸಿದ, ದುಡಿಮೆಯ ರೀತಿ-ನೀತಿ, ಶೋಷಣೆಯ ಪ್ರಮಾಣ ಮೊದಲಾದ ವಿಷಯಗಳೆಲ್ಲಾ ರೈತರಿಗೆ ಚೆನ್ನಾಗಿ ಅರ್ಥವಾದುವು.

ಲೋ-ಕುಟುಂಬದ ಒಬ್ಬ ಹೆಂಗಸಿನ ಚರ್ಚೆ ಬಂದಾಗ, ಸಮಸ್ಯೆ ತೊಡಕಿಗಿಟ್ಟುಕೊಂಡಿತು. ಅವಳಿಗೆ ೬ ವರ್ಷದ ಹುಡುಗನೊಬ್ಬನಿದ್ದ. ಅವಳ ಗಂಡ ಕೋಮಿಂಟಾಂಗ್‌ಸೈನ್ಯದಲ್ಲಿ ಸೇರಿಕೊಂಡು ನಾಪತ್ತೆಯಾಗಿದ್ದ. ಅವಳ ಹೆಸರಿನಲ್ಲಿದ್ದ ಸ್ವಲ್ಪ ಜಮೀನನ್ನೇ ಬಾಡಿಗೆಗೆ ಕೊಟ್ಟು ಜೀವನ ಸಾಗಿಸುತ್ತಿದ್ದಳು. ಅವಳೇ ದುಡಿಮೆಯಲ್ಲಿ ಭಾಗವಹಿಸದಿದ್ದುದರಿಂದಲೂ, ಅವಳ ಗಂಡನು ಜನರ ವಿರುದ್ಧ ಹೋರಾಡಿದ ಪ್ರತಿಗಾಮಿಗಳಿಗೆ ಸಹಾಯ ಮಾಡಿದ್ದರಿಂದಲೂ, ಅವಳನ್ನು ಜಮೀನ್ದಾರ ವರ್ಗಕ್ಕೆ ಸೇರಿಸಬೇಕೆಂದು ಫು-ಚುವಾನ್‌ನು ವಾದಿಸಿದ. “ಅವಳು ತುಂಬ ಕೆಟ್ಟವಳು ಮತ್ತು ಬೆಕ್ಕಿನಂತೆ ಮಳ್ಳಿ, ಆದ್ದರಿಂದ ಅವಳನ್ನು ಜಮೀನ್ದಾರ ವರ್ಗಕ್ಕೆ ಸೇರಿಸಬೇಕು”ಎಂದು ಚುನ್-ಸಿಂಗಳೂ ವಾದಿಸಿದಳು. ಆದರೆ ಹೆಚ್ಚು ತಿಳುವಳಿಕಸ್ಥನಾದ ಸೀವು, ತಲೆಯಲ್ಲಾಡಿಸುತ್ತಾ, “ವರ್ಗವಿನ್ಯಾಸ ಮಾಡುವಾಗ, ಶೋಷಣೆಯ

ಪ್ರಮಾಣವನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳಬೇಕು ರಾಜಕೀಯ ಅಭಿಪ್ರಾಯಗಳನ್ನೂ ವರ್ಗಗಳ ಸ್ಥಾನಮಾನವನ್ನೂ ಒಂದಕ್ಕೊಂದಕ್ಕೆ ಸರಿ ತೂಗಿಸಬಾರದು. ವೈಯುಕ್ತಿಕ ದ್ವೇಷಗಳಂತೂ, ಈ ವಿಷಯದಲ್ಲಿ ತಲೆ ಹಾಕಲೇಬಾರದು. ಅವಳೇನು ಕ್ರಾಂತಿ–ವಿರೋಧಿಯಲ್ಲ. ಹಾಗಿದ್ದರೆ ಎಂದೋ ಸೆರೆಮನೆ ಸೇರುತ್ತಿದ್ದಳು ಅವಳು ಮನೆಯಲ್ಲೂ ಜೀತದವರನ್ನಿಟ್ಟು ಕೊಂಡಿಲ್ಲ. ಅಲ್ಲದೆ ಅವಳು ಬಾಡಿಗೆಗೆ ಕೊಟ್ಟಿರುವ ಭೂಮಿಯೂ ಅತ್ಯಲ್ಪ. ಆದ್ದರಿಂದ ಒಬ್ಬ ಪುಟ್ಟ ಮಧ್ಯಮ ವರ್ಗದವಳೆಂದು ಅವಳನ್ನು ಕರೆಯ ಬಹುದು"ಎಂದು ವಿವರಿಸಿದನು.

§ § § §

ಹೀಗೆ ವರ್ಗ ವಿಂಗಡಣೆಯ ಅಭ್ಯಾಸ ೧೦ ದಿನಗಳವರೆಗೆ ನಡೆಯಿತು. ಅನಂತರ ಜಮೀನ್ದಾರರ ಮತ್ತು ಶ್ರೀಮಂತ ರೈತರ ಪಟ್ಟಿಗಳು ತಾತ್ಕಾಲಿಕ ವಾಗಿ ತಯಾರಿಸಲ್ಪಟ್ಟವು. ಇದಾದ ಎರಡು ದಿನಗಳ ಮೇಲೆ 'ವರ್ಗ ವಿಂಗಡಣೆಗಾಗಿ ಸಭೆ'ಯೊಂದು ದೇವಸ್ಥಾನದಲ್ಲಿ ಸೇರಿತು. ಜಮೀನ್ದಾರರ ಸುತ್ತ ಜನಸೈನ್ಯವು ಕಾವಲಿತ್ತು. ಲು-ಯಾಂಗ್‌ನು ಎದ್ದು ನಿಂತು, "ಇಂದು, ನಾವು ಹತ್ತು ದಿನಗಳ ಚರ್ಚೆಯ ನಂತರ, ಕೆಲವು ಜನರನ್ನು ಜಮೀನ್ದಾರ ರೆಂದು ಪರಿಗಣಿಸಬೇಕೆಂದು ತೀರ್ಮಾನಿಸಿದ್ದೇವೆ. ಈಗ ಅವರೇ ಮುಂದೆ ಬಂದು ತಮ್ಮ ಆಸ್ತಿ-ಪಾಸ್ತಿಗಳ ಬಗ್ಗೆ ಪ್ರಾಮಾಣಿಕತೆಯಿಂದ ಮಾಹಿತಿ ಕೊಡಲಿ. ಅವರೇನಾದರೂ ತಪ್ಪು ಹೇಳಿದಲ್ಲಿ, ನಿಮ್ಮಲ್ಲಿ ಯಾರು ಬೇಕಾ ದರೂ ಎದ್ದು ನಿಂತು ತೋರಿಸಿಕೊಡಲು ಹಿಂಜರಿಯಬೇಡಿ. ನಮ್ಮ ತೀರ್ಮಾನವು ಅನ್ಯಾಯವೆಂದು ಕಂಡು ಬಂದವರು, ಸಭೆ ಒಪ್ಪುವಂತೆ ತಮ್ಮ ಅಹವಾಲುಗಳನ್ನು ಹೇಳಿಕೊಳ್ಳಬಹುದು."ಎಂದು ಹೇಳಿದನು.

ಜಮೀನ್ದಾರ ಚೌ-ಚು ಮೊದಲು ಎದ್ದು ನಿಂತನು. ಇವನು ಸ್ವಲ್ಪ ವಿದ್ಯೆ ಕಲಿತವನು. ಸರ್ಕಾರದ ಭೂಸುಧಾರಣಾ ಕಾನೂನನ್ನು ಚೆನ್ನಾಗಿ ಓದಿಕೊಂಡು ಸಭೆಗೆ ಬಂದಿದ್ದನು. ತನ್ನ ಆಸ್ತಿಯ ಲೆಕ್ಕ-ವ್ಯವಹಾರಗಳ ನ್ನೆಲ್ಲಾ ವಿವರಿಸಿದ ಮೇಲೆ, ದುರಹಂಕಾರದಿಂದ ರೈತರತ್ತ ನೋಡುತ್ತಾ "ನನ್ನನ್ನು ಜಮೀನ್ದಾರನೆಂದು ನಿಮ್ಮ ಇಷ್ಟವಿದ್ದರೆ ಕರೆಯಿರಿ. ಆದರೆ

ನಾನು ಜಮೀನ್ದಾರನಂತೆ ಬೇರೊಬ್ಬರು ಬೆಳೆಸುವದನ್ನು ಊಟಮಾಡು ವುದಿಲ್ಲ. ನಾನೂ ದುಡಿಯುತ್ತೇನೆ. ಆದ್ದರಿಂದ ನನ್ನನ್ನು ಶ್ರೀಮಂತ ರೈತ ಎಂದು ವಿಂಗಡಿಸಬಹುದು" ಎಂದು ಹೇಳಿದನು.

ಕೂಡಲೇ, ೫ ವರ್ಷಗಳ ಕಾಲ ಅವನ ಮನೆಗೆಲಸ ಮಾಡುತ್ತಿದ್ದ ಟಾ-ಮಿಂಗ್, ಕೋಪದಿಂದ, "ಯಾವ ತರಹ ಕೆಲಸ ಮಾಡುತ್ತೀಯೆ ?" ಎಂದು ಕೇಳಿದ.

"ಹೊಲಗೆಲಸವು ಹೆಚ್ಚಾಗಿದ್ದ ಕಾಲದಲ್ಲಿ, ನಾನೂ ಸೂರ್ಯೋದಯಕ್ಕೆ ಮೊದಲೇ ಏಳುತ್ತಿರಲಿಲ್ಲವೇ ?"

"ಹೌದು, ಹೌದು. ನಮ್ಮನ್ನು ಕೆಲಸಕ್ಕೆ ತರದೂದು ಮಾಡಲು ಅಷ್ಟು ಬೇಗ ಏಳುತ್ತಿದ್ದೆ. ನಾವೆಲ್ಲ ಹೊರಟ ಮೇಲೆ ನೀನು ಪುನಃ ಮಲಗುತ್ತಿರಲಿಲ್ಲವೇ ? ಎಷ್ಟೋ ದಿನ, ನಾನು ೩-೪ ಬಾರಿ ನೀರು ತಂದ ಮೇಲೂ, ನೀನು ಇನ್ನೂ ಗೊರಕೆ ಹೊಡೆಯುತ್ತಿದ್ದುದನ್ನು ನೋಡಿದ್ದೇನೆ."

"ಆದರೆ ನಾನು ಮಳೆ ಸುರಿಯುತ್ತಿದ್ದರೂ, ಹೊಲ-ಗದ್ದೆಗಳಿಗೆ ಹೋಗಿ ಬರುತ್ತಿದ್ದೆ. ಅದು ಕೆಲಸವಲ್ಲದೆ ಮತ್ತೇನು ?"

ಟಾ-ಮಿಂಗನಿಗೆ ವಿಪರೀತ ಕೋಪ ಬಂತು. 'ಥುತ್' ಎಂದು ನೆಲದ ಮೇಲೆ ಉಗುಳಿ, "ಅದನ್ನು ಕೆಲಸ ಎಂದು ಹೇಳಿಕೊಳ್ಳುವುದಕ್ಕೆ ನಿನಗೆ ಎಷ್ಟು ಧೈರ್ಯ ? ನಾವೆಲ್ಲ ಕಣದಲ್ಲಿ ಕೆಲಸ ಮಾಡುತ್ತಿರುವಾಗ, ನೀನು ನಮ್ಮ ಮೇಲೆ ಉಸ್ತುವಾರಿ ನೋಡಲು ಬರುತ್ತಿದ್ದೆ, ಅಷ್ಟೆ. ಒಂದು ಕಾಳೂ ಹಾಳಾಗದಂತೆ, ಕೆಲಸವು ಚೆನ್ನಾಗಿಯೂ, ಜಾಗ್ರತೆಯಾಗಿಯೂ ಆಗುವಂತೆ ನಮಗೆ ಆಜ್ಞಾಪಿಸಲು ಬರುತ್ತಿದ್ದೆ. ನನ್ನ ಕೆಲಸ ಹೇಗಿತ್ತು ಗೊತ್ತೆ? ವಸಂತಕಾಲದ ಆರಂಭದಲ್ಲೇ, ಭೂಮಿ ಗಡಸಾಗಿದ್ದಾಗಲೇ ಉಳಲು ಪ್ರಾರಂಭಿಸುತ್ತಿದ್ದೆ. ನನ್ನ ಪಾದವೆಲ್ಲಾ ಬಿರಿದು ಗಾಯಗಳಿಂದ ತುಂಬಿರುತ್ತಿದ್ದಿತು. ಸಂಜೆಯಲ್ಲಿ ಕಾಲು ತೊಳೆಯುವಾಗ ನನಗಾದ ವೇದನೆ ಅಸಹನೀಯವಾದುದಾಗಿತ್ತು. ಹೀಗಿದ್ದಾಗಲೇ ಮಧ್ಯಾಹ್ನದ ಹೊತ್ತಿನಲ್ಲೂ ಸೂರ್ಯ ನೆತ್ತಿಯಮೇಲೆ ಸುಡುತ್ತಿದ್ದಾಗ ಏತದ ರಾಟೆಯನ್ನು ತಿರುಗಿಸುತ್ತಿದ್ದೆ. ನಿನಗೆ ಹೇಗೆ ಗೊತ್ತಾಗಬೇಕು ಆ ಕಷ್ಟ. ಕುಯಿಲಿನ ಸಮಯದಲ್ಲಿ, ರಾತ್ರಿ

ಯೆಲ್ಲ ಕೆಲಸ ಮಾಡಿ, ಹುಲ್ಲಿನ ಮೆದೆಯ ಮೇಲೇ ಮರದ ತುಂಡಿನಂತೆ ಬಿದ್ದಿರುತ್ತಿದ್ದೆ. ಬೆಳಿಗ್ಗೆ ಏಳುವುದರೊಳಗಾಗಿ ಮೈಯೆಲ್ಲಾ ಮಂಜಿನಿಂದ ತುಂಬಿ, ಥಂಡಿ ಕೊರೆಯುತ್ತಿತ್ತು ಹೀಗೇ ನೀನು ಕೇಳರಿಯದ ಇನ್ನೂ ಎಷ್ಟೋ ಕೆಲಸಗಳನ್ನು ನಾನು ಮಾಡಬೇಕಿತ್ತು. ನಾನು ಇದುವರೆಗೆ ಐದು ಜನ ಜಮೀನ್ದಾರರ ಕೈಕೆಳಗೆ ಕೆಲಸ ಮಾಡಿದ್ದೇನೆ. ನೀವೆಲ್ಲರೂ ಒಂದೇ ರೀತಿಯಲ್ಲಿ ಕ್ರೂರಿಗಳು. ನೀವೆಲ್ಲಾ ತಿನ್ನುವ ಕೆಲಸ ಮಾಡುತ್ತೀರಿ, ಅಷ್ಟೆ." ಎಂದು ಆವೇಶದಿಂದ ಹೇಳಿದನು.

ಇದುವರೆವಿಗೂ ಸುಮ್ಮನಿದ್ದ ಚಿಕ್ಕಪ್ಪ ಕುವಾಂಗ್-ಲಿನ್‌ನಿಗೂ ತಡೆಯಲಾಗಲಿಲ್ಲ. "ನಾನು ಅವನಿಂದ ಒಂದು ಟೌ ಹೊಲವನ್ನು ಮಾತ್ರ ವಾರಕ್ಕೆ ತೆಗೆದುಕೊಂಡಿದ್ದೆ. ಇದಕ್ಕಾಗಿ ನಾನು ಆಗಾಗ್ಗೆ ಅವನಿಗೆ ಕೋಳಿ ಗಳನ್ನು ಒಪ್ಪಿಸಬೇಕಾಗಿತ್ತು. ಒಂದು ಬಾರಿ ಅವನ ನಿರೀಕ್ಷೆಗೆ ವಿರುದ್ಧವಾಗಿ ಅವನ ಹೆಂಡತಿ ಹೆಣ್ಣು ಮಗುವನ್ನು ಹೆತ್ತಳು. ನಾನು ಹೆಣ್ಣು ಕೋಳಿ ಗಳನ್ನು ತೆಗೆದುಕೊಂಡುಹೋಗಿ ಕೊಡುತ್ತಿದ್ದುದರಿಂದ ಹೆಣ್ಣು ಮಗುವಾಯಿ ತೆಂದು, ಆ ತಪ್ಪನ್ನು ನನ್ನ ಮೇಲೆ ಹೊರಿಸಿದ. ಆದ್ದರಿಂದ ನಾನು ಹುಂಜ ವನ್ನು ಕೊಡಬೇಕಾಯಿತು. ಆದರೆ ಹುಂಜ ಮೊಟ್ಟೆ ಇಡುತ್ತಿರಲಿಲ್ಲವಾದ್ದ ರಿಂದ, ಜೊತೆಗೆ ಮೊಟ್ಟೆಗಳನ್ನೂ ಒದಗಿಸಬೇಕಾಗಿತ್ತು.

"ನಮ್ಮಿಂದ ಗುತ್ತಿಗೆಯ ಧಾನ್ಯವನ್ನು ತೆಗೆದುಕೊಳ್ಳಬೇಕಾದಾಗಲೂ, ಕಣ್ಣೀರು ಕರೆಯಿಸುತ್ತಿದ್ದನು. ಒಂದು ಹಿಡಿ ಬತ್ತವನ್ನು ಮೇಜಿನಮೇಲೆ ಹರಡಿ, ಗಟ್ಟಿಯಾಗಿ ಬಾಯಿಂದ ಊದುತ್ತಿದ್ದನು. ಕಾಳುಗಳು ಅಲುಗದೆ ನಿಂತರೆ ಸರಿ. ಇಲ್ಲವಾದರೆ, ಎಲ್ಲ ಜೊಳ್ಳೆಂದು ನಿರಾಕರಿಸುತ್ತಿದ್ದನು." ಎಂದು ಭಾವೋನ್ಮತ್ತನಾಗಿ ಹೇಳಿದನು.

ಅನಂತರ ಲೀ-ಜಿ-ಚಾಂಗ್ ಎಂಬ ರೈತ ಎದ್ದು ನಿಂತು, ಚೌ-ಚು ವಿನ ಕಡೆಗೆ ಬೆರಳು ಮಾಡಿ ತೋರಿಸುತ್ತಾ, "ನಾನು ಇವನಿಗೆ ಸೋದರಳಿಯ ನಾಗಬೇಕು. ಆದರೆ ಇವನು ನಮ್ಮ ಮನೆಯವರನ್ನು ಕಸಕ್ಕೂ ಕಡೆಯಾಗಿ ನೋಡುತ್ತಿದ್ದ. ನನ್ನ ತಾಯಿಗೆ ಒಂದು ಸಲ ತುಂಬ ಕಾಯಿಲೆಯಾದಾಗ, ಇವನಿಂದ ಸ್ವಲ್ಪ ಬತ್ತವನ್ನು ಸಾಲ ತೆಗೆದುಕೊಂಡಿದ್ದೆ. ಬತ್ತದ ಬೆಲೆ ಕಮ್ಮಿ

ಯಿದ್ದಾಗ ಬಡ್ಡಿಯ ವಿಚಾರವನ್ನೆತ್ತಲಿಲ್ಲ. ತುಂಬ ಕರುಣಾಳು ಎಂದು ಭಾವಿಸಿದ್ದೆ. ಆದರೆ ಎಂಟು ತಿಂಗಳ ನಂತರ, ಬತ್ತದ ಬೆಲೆ ಏರಿದಾಗ, ಬಡ್ಡಿ ಲೆಕ್ಕಹಾಕಿ ಒಂದಕ್ಕೆ ನಾಲ್ಕರಷ್ಟು ವಸೂಲು ಮಾಡಿದ. ಚಳಿಗಾಲದಲ್ಲಿ ಮೈಮುಚ್ಚಿಕೊಳ್ಳಲೂ ನನಗೆ ನಾಕಷ್ಟು ಬಟ್ಟೆ ಬರೆ ಇಲ್ಲ. ಆದರೆ ಇವನಿ



"ಮರೆಮಾಚಿ ಒಳಗೆ ತೊಟ್ಟಿದ್ದ ಮೃದುವಾದ ಉಣ್ಣೆಯ ಪದರದ ಗೌನು !"

ಗಾದರೆ ? ಇಲ್ಲಿ ನೋಡಿ"ಎಂದು ಚೌ-ಚುವಿನ ಹೊರ ಅಂಗಿಯನ್ನು ಮೇಲೆತ್ತಿ ಒಳಗಿದ್ದ ಉಣ್ಣೆಯ ಪದರವನ್ನು ಎಲ್ಲರಿಗೂ ತೋರಿಸುತ್ತಾ, "ಉಣ್ಣೆಯ ಪದರದ ಗೌನು ! ನೀನು ನನಗೆ ಚಿಕ್ಕಪ್ಪನಾದರೇನು ? ವಿಶ್ವಾಸ ಘಾತುಕ ಜಮೀನ್ದಾರರಲ್ಲಿ ನೀನೂ ಒಬ್ಬ"ಎಂದು ಹೇಳಿದನು.

ತನ್ನ ಸಂಬಂಧಿಯೇ ಹೀಗೆ ಹೇಳುವಾಗ, ಚೌ-ಚು ತನ್ನ ವಾದವನ್ನು ಮುಂದುವರಿಸಲಾಗಲಿಲ್ಲ. "ಆಗಲಿ, ಆಗಲಿ. ನನ್ನನ್ನು ಜಮೀನ್ದಾರ ಎಂದೇ ಕರೆಯಿರಿ" ಎಂದು ಮಾತ್ರ ಗೊಣಗುಟ್ಟಿದ. ಇನ್ನೂ ಅನೇಕರು ಮುಂದೆ ಬಂದು ತಮ್ಮ ಅಭಿಪ್ರಾಯಗಳನ್ನು ಹೇಳಿದರು. ಲು-ಯಾಂಗ್ ಎಲ್ಲವನ್ನೂ ತನ್ನ ಪುಸ್ತಕದಲ್ಲಿ ಗುರ್ತು ಹಚ್ಚಿಗೊಂಡ. ಇನ್ನೂ ಅನೇಕ ಮಂದಿ ಜಮೀನ್ದಾರರು ಕಾದಿದ್ದರೂ, ರೈತರು ತಮ್ಮ ಎಲ್ಲ ಕಷ್ಟಗಳನ್ನೂ ಹೇಳಿಕೊಳ್ಳುವುದಕ್ಕೆ ಸಂಪೂರ್ಣ ಅವಕಾಶ ಕೊಟ್ಟ. ಒಮ್ಮೊಮ್ಮೆ ಜಮೀನ್ದಾರರ ನೀಚತನಕ್ಕೆ ಸಿಟ್ಟಾಗಿ ಅವರತ್ತ ಬಿರುಗಣ್ಣಿನಿಂದ ನೋಡುತ್ತಿದ್ದ.

ಕೈಗಾರಿಕೋದ್ಯಮ ಮತ್ತು ವ್ಯಾಪಾರದಲ್ಲಿ ನಿರತರಾದ ಜಮೀನ್ದಾರರು ನಾನಾ ವಿಧವಾದ ಸಮಸ್ಯೆಗಳನ್ನು ತಂದೊಡ್ಡಿದರು. ........ಆದರೂ ಐದು ದಿನಗಳ ಚರ್ಚೆ, ವಿಚಾರ ವಿನಿಮಯವಾದ ಮೇಲೆ, ಸ್ಕಿಲುಹಳ್ಳಿಯ ಜಮೀನ್ದಾರರ ಪಟ್ಟಿಯೊಂದು ತಯಾರಾಯಿತು. ಇದಾದ ಮೂರು ದಿನ ನಂತರ ಶ್ರೀಮಂತ ರೈತರ ಪಟ್ಟಿಯೂ ಸಿದ್ಧವಾಯಿತು. ರೈತ ಸಂಘದವರೂ ರೈತ ಕೂಲಿಯಾಳುಗಳೂ ಎಲ್ಲವನ್ನೂ ಕೂಲಂಕುಶವಾಗಿ ಪರಿಶೀಲಿಸಿ ಒಪ್ಪಿದ ಮೇಲೆ, ವರ್ಗ ವಿಂಗಡಣೆಯ ಪಟ್ಟಿಯನ್ನು ದೇವಸ್ಥಾನದ ಗೋಡೆಯಮೇಲೆ ಅಂಟಿಸಿದರು. ಜಮೀನ್ದಾರರ ಹೆಸರುಗಳು ಬಿಳಿಯ ಪಟ್ಟಿಯಲ್ಲೂ, ಶ್ರೀಮಂತರ ಹೆಸರುಗಳು ಹಳದಿ ಪಟ್ಟಿಯಲ್ಲೂ ಪ್ರಕಟಿಸಲ್ಪಟ್ಟವು.

ಮಧ್ಯಮ ವರ್ಗದ ರೈತರು, ಬಡರೈತರು ಮತ್ತು ರೈತ–ಕೂಲಿಗಳ ವಿಂಗಡಣೆಯಾಗಬೇಕಾದಾಗ ವಾತಾವರಣವೇ ಬದಲಾಗಿತ್ತು. ಕೆಲವರು ತಮ್ಮ ಜಮೀನಿನ ಬಗ್ಗೆ, ತಮ್ಮಲ್ಲಿರುವ ದನ ಕರುಗಳು, ಸಲಕರಣೆಗಳ ಬಗ್ಗೆ ಮಾಹಿತಿ ಕೊಡುವಾಗ ತಪ್ಪಿದಲ್ಲಿ, ಸ್ವಲ್ಪ ಗದ್ದಲವಾಗುತ್ತಿತ್ತು. ಆದರೆ

ಅದು ಸಂಸಾರದಲ್ಲಿ ನಡೆಯುವ ಗದ್ದಲದಂತಿತ್ತು—ಶಬ್ದ ಮಾತ್ರ ವಿಪರೀತ ಆದರೆ ಹಗೆತನ ಅಥವಾ ಮಾತ್ಸರ್ಯ ಒಂದಿಷ್ಟೂ ಇರಲಿಲ್ಲ. ಸಭೆಗೆ ಬಂದಿದ್ದರೂ, ಎಲ್ಲರೂ ತಮ್ಮ ಮನೆಗಳಲ್ಲಿದ್ದಂತೆಯೇ ಆರಾಮವಾಗಿ ಕುಳಿತಿದ್ದರು. ತಾಯಂದಿರು ಮಕ್ಕಳಿಗೆ ಹಾಲುಣಿಸುತ್ತಿದ್ದರು. ಕೆಲವು ಹುಡುಗರು ಸುತ್ತ ಮುತ್ತ ಆಟವಾಡುತ್ತಿದ್ದರು. ಎಲ್ಲರೂ ಮರ್ದಿತ ವರ್ಗಕ್ಕೆ ಸೇರಿದವರು. ಆದ್ದರಿಂದ ಸಂದೇಹ, ಸಂಶಯಗಳಿಗೆ ಆಸ್ಪದವೇ ಇರಲಿಲ್ಲ.

ಮಧ್ಯಮ ವರ್ಗದ ರೈತರಿಂದ ಮೊದಲಾಗಿ ರೈತರ ಪಟ್ಟಿಯೂ ತಯಾರಾಯಿತು. ಕೆಲವು ಮಧ್ಯಮ ವರ್ಗದ ರೈತರು ತಾವು ಬಡರೈತರೆಂದು ವಾದಿಸಲು ಪ್ರಯತ್ನಿಸಿದರು. ಲು-ಯಾಂಗ್‌ನು ಅವರಿಗೆ ಸೂಕ್ತ ಸಮಾಧಾನ ಹೇಳಿದನು : "ಜಮೀನ್ದಾರರನ್ನು ಬೇರ್ಪಡಿಸುವುದೇ ವರ್ಗೀಕರಣದ ಮುಖ್ಯ ಉದ್ದೇಶ. ನೀವು ರೈತರೆಲ್ಲ ಒಂದೇ. ಇನ್ನು ಸ್ವಲ್ಪ ಕಾಲದಲ್ಲೇ ಬಡರೈತರೂ ನಿಮ್ಮ ಮಟ್ಟಕ್ಕೆ ಬಂದೇಬರುವರು."

ಮೊದಲಿನ ಬಿಳಿ ಮತ್ತು ಹಳದಿ ಪಟ್ಟಿಗಳ ಜೊತೆಗೆ ಶೋಷಣೆಗೆ ತುತ್ತಾಗಿದ್ದ ರೈತರ ಕೆಂಪು ಪಟ್ಟಿಯೂ ದೇವಸ್ಥಾನದ ಬಳಿ ಅಂಟಿಸಲ್ಪಟ್ಟಿತು. ಹಳ್ಳಿಯ ರೈತರೆಲ್ಲರೂ ತಮ್ಮ ಹೆಸರುಗಳನ್ನು ನೋಡಲು ದೇವಸ್ಥಾನದಕಡೆಗೆ ಓಡಿಹೋಗುತ್ತಿದ್ದರು. ಈ ಗುಂಪಿನಲ್ಲಿ ಫೂ-ಚುವಾನ್ ಮತ್ತು ಚುನ್-ಚುನ್‌ಸಿಂಗ್‌ರೂ ಇದ್ದರು. ರಾತ್ರಿಶಾಲೆಗೆ ಹೋಗುತ್ತಿದ್ದುದರ ಫಲವಾಗಿ ಅವರಿಗೆ ತಮ್ಮ ಹೆಸರುಗಳನ್ನು ಕೂಡಲೇ ಕಂಡುಹಿಡಿಯಲು ಸಾಧ್ಯವಾಯಿತು.

" ನಿನ್ನನ್ನು ವ್ಯವಸಾಯ-ಕೂಲಿಗಳ ಗುಂಪಿನಲ್ಲಿ ಸೇರಿಸಿದ್ದಾರೆ. ನಿನಗೆ ಸಂತೋಷವಾಯಿತೆ ?'' ಎಂದು ಚುನ್-ಸಿಂಗ್ ಕೇಳಿದಳು

" ನನ್ನ ಹೆಸರು ಇದೆ ಎನ್ನುವುದಕ್ಕೆ ಮಾತ್ರವೇ ಅಲ್ಲ, ನಮ್ಮ ಗುಂಪಿನಲ್ಲಿ ಎಷ್ಟೊಂದು ಮಂದಿ ಇದ್ದಾರೆ ಎನ್ನುವುದಕ್ಕೂ ನನಗೆ ಸಂತೋಷವಾಗಿದೆ ''

ಪಕ್ಕದಲ್ಲೇ ಜನರಿಗೆ ಹೆಸರನ್ನು ಓದಿ ಹೇಳುತ್ತಿದ್ದ ಶಿವು ತಿರುಗಿ ಹೇಳಿದ: '' ಹೌದು. ನಾವೆಷ್ಟೊಂದು ಮಂದಿ ಇದ್ದೇವೆ. ಆದರೂ ನಮ

ಗೆಲ್ಲ ಇರುವುದು ಒಂದೇ ಹೃದಯ! ಅಲ್ಲದೆ, ನಮ್ಮ ಮುಂದೆ ಅಧ್ಯಕ್ಷ ಮಾವೋ ಮತ್ತು ಕಮ್ಯೂನಿಸ್ಟ್ ಪಾರ್ಟಿ ನಾಯಕತ್ವ ವಹಿಸಿ ನಿಂತಿದ್ದಾರೆ. ಜಮೀನ್ದಾರರು ಇನ್ನು ಎಂದೆಂದಿಗೂ ತಮ್ಮ ಹಳೆಯ ಅಧಿಕಾರ ಪಡೆಯಲಾರರು.

ಮಾರನೆಯ ದಿನ ಲು-ಯಾಂಗ್‌ನು ಜಮೀನ್ದಾರರನ್ನೆಲ್ಲಾ ಸಭೆ ಸೇರಿಸಿ, "ನಿಮ್ಮಲ್ಲಿ ಯಾರನ್ನಾದರೂ ತಪ್ಪಾಗಿ ಜಮೀನ್ದಾರರೆಂದು ವಿಂಗಡಿಸಿದ್ದರೆ ಇನ್ನು ೧೫ ದಿನದೊಳಗಾಗಿ ಪ್ರಾಂತೀಯ ಜನತಾ ನ್ಯಾಯಾಲಯಕ್ಕೆ 'ಅಪೀಲು' ಹೋಗಲು ಅವಕಾಶವಿದೆ. ಎಲ್ಲವನ್ನೂ ಕೂಲಂಕುಶವಾಗಿ ಪರಿಶೀಲಿಸಿದಮೇಲೆ ಮೂರನೆಯ ಬಾರಿಗೆ ಪಟ್ಟಿಯನ್ನು ಪ್ರಕಟಿಸುವೆವು. ಅದೇ ಕೊನೆಯದು. ಅದಾದಕೂಡಲೇ, ಜಮೀನ್ದಾರರು ತಮ್ಮಲ್ಲಿರುವ ಎಲ್ಲಾ ಜಮೀನನ್ನೂ, ವ್ಯವಸಾಯ ಸಾಮಗ್ರಿಗಳನ್ನೂ, ಅವಶ್ಯವಾದ್ದಕ್ಕಿಂತ ಹೆಚ್ಚಾಗಿರುವ ಮನೆಗಳು ಮತ್ತು ದವಸಧಾನ್ಯಗಳನ್ನೂ ಒಪ್ಪಿಸಬೇಕು. ರೈತಗುತ್ತಿಗೆದಾರರು ಕೊಟ್ಟಿರುವ ಮುಂಗಡ ಹಣವನ್ನು ಅವರಿಗೇ ಹಿಂದಿರುಗಿಸಬೇಕು. ಎಲ್ಲ ಸಾಲದ ಪತ್ರಗಳನ್ನೂ ರದ್ದುಮಾಡಬೇಕು. ಸ್ವಾತಂತ್ರ್ಯ ಬಂದಮೇಲೆ ಯಾರಾದರೂ ಜಮೀನು ಅಥವಾ ದನಕರುಗಳನ್ನು ಮಾರಿದ್ದರೆ, ಅದನ್ನು ನಾವು ಮಾನ್ಯ ಮಾಡುವುದಿಲ್ಲ. ಅವರು ಮಾರಿದ ವಸ್ತುಗಳನ್ನು ಹಿಂದಕ್ಕೆ ಪಡೆದು ಒಪ್ಪಿಸಬೇಕು, ಅಥವಾ ಅವುಗಳ ಕ್ರಯದ ಮೊಬಲಗನ್ನು ಕೊಡಬೇಕು. ರೈತಸಂಘವು ನಿಮ್ಮ ಆಸ್ತಿಪಾಸ್ತಿಗಳನ್ನು ವಶವಡಿಸಿಕೊಳ್ಳುವವರೆಗೂ, ನೀವು ಅವುಗಳನ್ನು ಜಾಗರೂಕತೆಯಿಂದ ಕಾಪಾಡಬೇಕು. ಏನಾದರೂ ನಷ್ಟವಾದರೆ ಅಥವಾ ಕಾಣದಾದರೆ ಅದಕ್ಕೆ ನೀವೇ ಕಾರಣರಾಗುತ್ತೀರಿ. ಹಿಂದಿನಂತೆ ನೀವು ನಿಮ್ಮ ಮನೆಗಳಲ್ಲಿ ಬಂಧುಮಿತ್ರರನ್ನಿಟ್ಟುಕೊಳ್ಳಲು ಅವಕಾಶವಿಲ್ಲ. ಅಲ್ಲದೆ, ನೀವು ಹಳ್ಳಿಯನ್ನು ಬಿಟ್ಟು ಹೊರಗೆ ಹೋಗಬೇಕಾದರೆ, ರೈತಸಂಘದ ನಾಯಕನ ಅಪ್ಪಣೆಪಡೆದು ಹೋಗಬೇಕು" ಎಂದು ಎಚ್ಚರಿಕೆಯ ಮಾತುಗಳನ್ನು ಹೇಳಿದನು.

ಅನಂತರ ಶ್ರೀಮಂತರೈತರ ಸಭೆ ಸೇರಿಸಿ, "ನೀವೂ ಪ್ರಾಂತೀಯ ಸರ್ಕಾರಕ್ಕೆ 'ಅಪೀಲು' ಹೋಗಬಹುದು. ಆದರೆ ಒಂದು ವಿಷಯ ಜ್ಞಾಪಕ

ದಲ್ಲಿಡಿ: ನಮ್ಮ ಸರ್ಕಾರದ ನೀತಿ, ಹಳ್ಳಿಗಾಡಿನಲ್ಲಿ ಶ್ರೀಮಂತ ರೈತ ಆರ್ಥಿಕ ವ್ಯವಸ್ಥೆಯನ್ನು ಮುಂದುವರಿಸುವುದೇ ಆಗಿದೆ. ಆದ್ದರಿಂದ ನೀವು ಬಾಡಿಗೆಗೆ ಕೊಟ್ಟಿರುವ ಜಮೀನನ್ನು ಮಾತ್ರ ಭೂಸುಧಾರಣಾ ಕಾನೂನಿನ ಪ್ರಕಾರ ವಶಪಡಿಸಿಕೊಳ್ಳುತ್ತೇವೆ. ಹಳ್ಳಿಯಲ್ಲಿ ಉಳಲು ಯೋಗ್ಯವಾದಭೂಮಿಯು ಅಲ್ಪವಾಗಿರುವುದರಿಂದ ಇದು ಅನಿವಾರ್ಯವಾಗಿದೆ. ನೀವೇ ಉಳುತ್ತಿರುವ ಜಮೀನನ್ನಾಗಲೀ, ಉಪಯೋಗಿಸುತ್ತಿರುವ ಆಸ್ತಿಪಾಸ್ತಿಗಳನ್ನಾಗಲೀ ವಶ ಪಡಿಸಿಕೊಳ್ಳುವುದಿಲ್ಲ. ನೀವೆಲ್ಲಾ ಜನತಾ ಸರ್ಕಾರದ ಮಾತಿನಲ್ಲಿ ವಿಶ್ವಾಸ ವಿಟ್ಟು ಸುಳ್ಳುಸುದ್ದಿಗಳಿಗೆ ಕಿವಿಗೊಡದೆ, ಉತ್ಪತ್ತಿಯನ್ನು ಹೆಚ್ಚಿಸುವುದರಲ್ಲಿ ತೊಡಗುವಿರೆಂದು ನಾವು ಆಶಿಸುತ್ತೇವೆ " ಎಂದು ಹುರಿದುಂಬಿಸುವ ಮಾತು ಗಳನ್ನಾಡಿದನು.

ಗ್ರಾಮಾಧ್ಯಕ್ಷ ಯು-ಟಾಂಗ್ ವರ್ಗವಿಂಗಡಣೆಗೆ ಸಂಬಂಧಿಸಿದ ಎಲ್ಲ ಕಾಗದ ಪತ್ರಗಳನ್ನೂ ಜಿಲ್ಲಾಸರ್ಕಾರಕ್ಕೆ ಕಳುಹಿಸಿಕೊಟ್ಟನು. ಎಲ್ಲವನ್ನೂ ತುಂಬಾ ಎಚ್ಚರಿಕೆಯಿಂದ ವಿಮರ್ಶಿಸಿ, ಅಲ್ಲಿಇಲ್ಲಿ ಇದ್ದ ಕೆಲವು ತಪ್ಪುಗಳನ್ನು ತೋರಿಸಿಕೊಟ್ಟು, ಜಿಲ್ಲಾಸರ್ಕಾರವು ಅಂತಿಮ ಪಟ್ಟಿಯನ್ನು ಕಳುಹಿಸಿ ಕೊಟ್ಟಿತು; ರೈತರಲ್ಲಿದ್ದ ಅನಗತ್ಯ ಹೆದರಿಕೆ ಮತ್ತು ತಪ್ಪು ಭಾವನೆಗಳನ್ನು ಹೋಗಲಾಡಿಸಲು ಪ್ರಚಾರಕಾರ್ಯವನ್ನು ಬಿರುಸಾಗಿ ನಡೆಸಬೇಕೆಂದು ಆದೇಶವಿತ್ತಿತು.

ಅದರಂತೆ ಲು-ಯಾಂಗ್, ಹಳ್ಳಿಯ ವರ್ಗಜಾಗೃತ ಕಾರ್ಯಕರ್ತರ ಸಹಾಯದಿಂದ 'ಮನೆ ಶುದ್ಧಿಮಾಡುವ' ಕೆಲಸದಲ್ಲಿ ನಿರತನಾದ. ಜಮೀ ನ್ದಾರನ ಹಿಂಬಾಲಕನಾಗಿದ್ದು, ಮೋಸದಿಂದ ಪಂಚಾಯತ ಸ್ಥಾನಕ್ಕೇರಿದ್ದ ಲಿಯಾವೋ-ಚೋ-ನಾನ್ ಎಂಬುವನನ್ನು ಪತ್ತೆಹಚ್ಚಿ, ಪದಚ್ಯುತಿಗೊಳಿಸಿ ದ್ದಲ್ಲದೆ, ರೈತಸಂಘದ ಸದಸ್ಯತನದಿಂದಲೂ ಕಿತ್ತುಹಾಕಿದನು. ಹಳ್ಳಿಯಲ್ಲಿ ರುವವರನ್ನೆಲ್ಲಾ, ಶತ್ರುಗಳು, ಮಿತ್ರರು ಮತ್ತು ತಮ್ಮವರು—ಎಂದು ೩ ವಿಭಾಗವಾಗಿ ವಿಂಗಡಿಸಿಕೊಂಡಿದ್ದ.

ಜಿಲ್ಲಾಸರ್ಕಾರದಿಂದ ಅಂತಿಮ ಪಟ್ಟಿ ಬಂದ ದಿನ, ಸ್ಕಿಲು ಹಳ್ಳಿಯ ಮಹತ್ವದ ದಿನ, ಮಹೋತ್ಸವದ ದಿನವಾಗಿತ್ತು. ದೇವಸ್ಥಾನದ ಬಳಿ ಭಾರಿ

ಸಭೆ ಸೇರಿತು. ದೇವಸ್ಥಾನದ ಎಲ್ಲ ಭಾಗಗಳೂ ಶೃಂಗರಿಸಲ್ಪಟ್ಟಿದ್ದವು. ಗೋಡೆಗಳಮೇಲೆ, "ಕಮ್ಯೂನಿಸ್ಟ್ ಪಾರ್ಟಿಯನ್ನು ಸದಾ ಅನುಕರಿಸಿ"; "ರೈತರ ಐಕ್ಯರಂಗ ಚಿರಾಯುವಾಗಲಿ"; "ಜಮೀನ್ದಾರೀ-ಭೂಮಾಲೀಕ ವರ್ಗವನ್ನು ತೊಡೆದುಹಾಕಿ" ಎಂಬ ಘೋಷಣೆಗಳು ಬರೆದಿದ್ದವು. ರೈತರೆಲ್ಲರೂ ಗುಂಪಾಗಿ, ಜಾಗಟೆ-ತಮ್ಮಟೆಗಳನ್ನು ಬಡಿದುಕೊಂಡು, ಕೂಗುತ್ತಾ ಕೆನೆಯುತ್ತಾ, ದೊಡ್ಡದೊಡ್ಡ ಕೆಂಬಾವುಟಗಳನ್ನು ಹಿಡಿದುಕೊಂಡು ವಿಜೃಂಭಣೆಯಿಂದ ಮೆರವಣಿಗೆಯಲ್ಲಿ ಬಂದರು. ಅಂದಿನ ಸಂಭ್ರಮಸಮಾರಂಭಕ್ಕೆ ತಕ್ಕಂತೆ ತಂಪಾದ, ಆಹ್ಲಾದಕರವಾದ ವಾತಾವರಣವಿದ್ದಿತು.

ರಾಷ್ಟ್ರಗೀತೆಯಿಂದ ಸಭೆ ಆರಂಭವಾದಮೇಲೆ, ಭೂಸುಧಾರಣಾದಳದ ನಾಯಕ ಚಿ-ಮಿನ್ ಮಾತನಾಡಿದ: "ಭೂಸುಧಾರಣೆ ಏತಕ್ಕಾಗಿ ಎಂದು ತಿಳಿದಿದ್ದೀರಿ?" ಜಮೀನ್ದಾರರ ಕಡೆ ತೋರಿಸುತ್ತ, "ಈ ಕೆಲವೇ ಮಂದಿ ನಿಮ್ಮನ್ನು ಶೋಷಿಸಲು ಏರ್ಪಡಿಸಿಕೊಂಡಿದ್ದ ವಿಶೇಷ ಅಧಿಕಾರಗಳನ್ನು ಒಂದೇಬಾರಿಗೆ ನಿರ್ನಾಮ ಮಾಡುವುದೇ ಆಗಿದೆ." ಪುನಃ ರೈತಸಮೂಹವನ್ನು ತೋರಿಸುತ್ತಾ "ನೀವು ರೈತವರ್ಗಗಳು ಸುಸಂಘಟಿತರಾಗಿ ಒಗ್ಗಟ್ಟಿನಿಂದ ಉತ್ಪತ್ತಿಕಾರ್ಯದಲ್ಲಿ, ವಿದ್ಯಾಭ್ಯಾಸದಲ್ಲಿ ಮತ್ತು ಆತ್ಮರಕ್ಷಣೆಯಲ್ಲಿ ತೊಡಗಿದ್ದೀರಾದರೆ, ಈ ಪಾಳೆಗಾರಿ ಪದ್ಧತಿಯನ್ನು ಬುಡಮಟ್ಟ ಕಿತ್ತು ಹಾಕುವುದರಲ್ಲಿ ಏನೇನೂ ಸಂಶಯವಿಲ್ಲ........" ಎಂದು ಉಚ್ಚ ಕಂಠದಲ್ಲಿ ಹೇಳಿದನು.

# ಬಿರುಗಾಳಿಯ ಬಳಿಕ ಹೂ ಬಿಸಿಲು

೧೯೫೦ರ ಕೊನೆಯ ದಿನಗಳು ಕಳೆದವು. ಮಳೆಯು ನಿಂತಮೇಲೆ ನೆಲವೆಲ್ಲವೂ ನೀರುಂಡು ಪೈರುಪಚ್ಚೆಗಳು ಕಳಕಳಿಸಿ ಗರಿಗಳಲ್ಲಿ ಮಳೆಯ ಹನಿಮುತ್ತುಗಳನ್ನು ಹೊತ್ತು ಸೂರ್ಯನ ಅಚ್ಚಬೆಳಕಿನಲ್ಲಿ ಪ್ರಕಾಶಿಸುವಂತೆ ೧೯೫೧ನೆಯ ವರ್ಷವು ಪ್ರಾರಂಭವಾಯಿತು. ನಿಜಕ್ಕೂ ೧೯೫೦ನೆಯ ವರ್ಷ ಹಿಂದೆಂದೂ ಕಾಣದಂತಹ, ಆ ಹಳ್ಳಿಯ ರೈತರು ಮುಂದೆ ಯುಗ ಯುಗಗಳತನಕ ನೆನೆಸಿಕೊಳ್ಳುವಂತಹ ಮಹತ್ತಾದ ವರ್ಷವಾಗಿತ್ತು. ಈಗ ರೈತಸಂಘ ಅಮೂಲ್ಯ ಸಸಿಯನ್ನು ಚೆನ್ನಾಗಿ ಬೆಳಸುವುದು ಮುಖ್ಯ ಕೆಲಸ ವಾಯಿತು. ಈ ಕಾರ್ಯದಲ್ಲಿ, ರೈತರ ಬಳಗದಲ್ಲಿ ಜಮೀನ್ದಾರ ಅಥವಾ ಅದರ ಗುಪ್ತ ಹಿತಸಾಧಕರೆಂಬ ಕಳೆಯನ್ನು ಶೋಧಿಸಿ ಕಿತ್ತುಹಾಕುವುದು ಮೊದಲನೆಯ ಹೆಜ್ಜೆ. ಅನಂತರ ರೈತರ ಬಳಗಕ್ಕೆ ರೈತರೆಲ್ಲರನ್ನೂ ಸೇರಿಸಿ ಬಲಿಷ್ಠವಾದ ಸಂಘಟನೆ ಕಟ್ಟುವುದು ಅವಶ್ಯವಾಯಿತು.

ಇದಕ್ಕಾಗಿ ಒಟ್ಟು ೧೨ ಮಂದಿ ಸದಸ್ಯರುಳ್ಳ ಒಂದು ಸಮಿತಿ ಆರಿಸಲ್ಪಟ್ಟಿತು. ಇದಕ್ಕೆ ರಾಜಕೀಯದಲ್ಲಿ ಒಳ್ಳೆಯ ಪರಿಶ್ರಮವುಳ್ಳ, ಓದುಬರಹ ಕಲಿತ, ಪಟ್ಟಿಯನ್ನು ತಯಾರಿಸಿ ವಿಂಗಡಿಸುವಷ್ಟು ಲೆಕ್ಕಾಚಾರ ಮಾಡಬಲ್ಲ ಸಿ-ವೂ ಅಧ್ಯಕ್ಷನಾದ. ಅವನ ಕೈಕೆಳಗೆ ನಾಲ್ಕು ಖಾತೆಗಳಿದ್ದವು: ಜನ ಸೈನ್ಯ, ಸಂಘಟನೆ, ಸಾಂಸ್ಕೃತಿಕ ಸಮಿತಿ ಮತ್ತು ಮಹಿಳಾ ಸಮಿತಿ. ಇದರ ಜೊತೆಗೆ ಸಂಗ್ರಹ, ರವಾನೆ ಮತ್ತು ಹಂಚಿಕೆಗಾಗಿ, ಹಂಗಾಮಿ ಸಮಿತಿ ಯೊಂದು ಭೂಸುಧಾರಣೆಯನ್ನು ಪೂರ್ಣವಾಗಿ ಜಾರಿಗೆ ತರಲು ಅನುಕೂಲ ವಾಗುವಂತೆ, ನೇಮಿಸಲ್ಪಟ್ಟಿತು.

ಹೀಗೆ ಸ್ಥಾಪಿಸಿದ ಹೊಸ ಸಂಘಟನೆಯಲ್ಲಿ ಬಿರುಸಿನಿಂದ ಕೆಲಸ ಮಾಡುವ ಹಳ್ಳಿಯ ಕಾರ್ಯಕರ್ತರಿಗೆಲ್ಲ ಜವಾಬ್ದಾರಿಯುತ ಸ್ಥಾನಗಳು ದೊರೆತವು. ಷು-ಮಿನ್ ಮತ್ತು ಪ್ರಾಥಮಿಕ ಶಾಲೆಯ ಉಪಾಧ್ಯಾಯ ಕೋ-ಚ್ಞಾಂಗ್ 'ವಿಚಾರಣಾ ಸಮಿತಿ' ಯಲ್ಲಿದ್ದರು. ಫು-ಚುವಾನ್ ಮತ್ತು ಚುನ್-ಸಿಂಗ್ 'ಸಂಗ್ರಹಣಸಮಿತಿ'ಗೆ ಸೇರಿಸಲ್ಪಟ್ಟರು. ಟಾ-ಮಿಂಗ್

ಮತ್ತು ಯು-ಲಿಂಪುನ್‌ರು 'ರವಾನೆ ಸಮಿತಿ'ಗೆ ಸೇರಿದರು. ಭೂಸುಧಾರಣೆಯಲ್ಲಿ ಹಂಚಿಕೆಯು ಬಹು ಕ್ಲಿಷ್ಟವಾದ ಮತ್ತು ಕಷ್ಟವಾದ ಕೆಲಸವಾದ್ದರಿಂದ 'ಹಂಚಿಕೆ ಸಮಿತಿ'ಯಲ್ಲಿ ೧೬ ಮಂದಿ ಇದ್ದರು—೭ ಬೇಸಾಯಕೂಲಿಗಳು, ೫ ಬಡರೈತರು ಮತ್ತು ೪ ಮಧ್ಯಮ ರೈತರು. ಇವರೆಲ್ಲ ಹಳ್ಳಿಯಲ್ಲಿದ್ದ ಅನೇಕ ಚಿಕ್ಕಚಿಕ್ಕ ಗುಂಪುಗಳಿಂದ ಆರಿಸಿಬಂದವರಾಗಿದ್ದರು.

* * * *

ರೈತವರ್ಗದ ಕೊನೆಯ ಹೊಡೆತಕ್ಕೆ ಸಿಕ್ಕಿ ತಮ್ಮ ಹಳೆಯ ವೈಭವ ಮತ್ತು ಅಹಂಕಾರವನ್ನು ಕಳೆದುಕೊಂಡಿದ್ದರೂ, ಜಮೀನ್ದಾರರು ಅಷ್ಟು ಸುಲಭವಾಗಿ ಮಣಿಯಲು ಇಚ್ಛಿಸಲಿಲ್ಲ. ತಮ್ಮ ಆಸ್ತಿಯನ್ನು ಸಣ್ಣಸಣ್ಣದಾಗಿ ವಿಂಗಡಿಸುವುದು, ಬಚ್ಚಿಡುವುದು ಮತ್ತು ರೈತರಮಧ್ಯೆ ಗುಂಪು-ಜಗಳಗಳನ್ನು ಹುಟ್ಟಿಸುವುದು—ಹೀಗೇ ನಾನಾ ವ್ಯೂಹ ವಿಧಾನಗಳಿಂದ ತಮ್ಮ ಸೇಡನ್ನು ತೀರಿಸಿಕೊಳ್ಳಲು ಯತ್ನಿಸಿದರು.

ಸೆರೆಮನೆಯಲ್ಲಿದ್ದ ಲೋ-ಪೈ-ಜಂಗ್‌ನ ತಮ್ಮನ ಮಗನಾದ ಲೋ-ಮೆಂಗ್-ಸಿಯಾಂಗ್‌ನು, ರೈತಸಂಘವು ಜಮೀನುವಿಭಜನಾ ಕಾರ್ಯದಲ್ಲಿ ತೊಡಗಿದ್ದಾಗ, ತನ್ನ ಚಿಕ್ಕಪ್ಪನು ಬೆಳೆಸಿದ್ದ ಪೈನ್ ಮರಗಳನ್ನೆಲ್ಲ ಕತ್ತರಿಸಿ, ಬಡಗಿಯ ಸಹಾಯದಿಂದ ೨ ಶವದ ಪೆಟ್ಟಿಗೆಗಳನ್ನು ಮಾಡಿಸಿಕೊಂಡು, ಉಳಿದ ಮರವನ್ನು ಮಾರಿದನು. ಆದರೂ ಅವನು ಹಣವಿಲ್ಲದವನಂತೆ ಯಾವಾಗಲೂ ಮಾಸಲು ಬಟ್ಟೆಯನ್ನೇ ಉಡುತ್ತಿದ್ದನು. ತಾವು ಬಡವರು ಎಂದು ನಟಿಸುವುದಕ್ಕೆ ಅವನ ಹೆಂಡತಿಯು ಊರಿನಲ್ಲೆಲ್ಲಾ ತಿರುಗಿ ಅಕ್ಕಿಯನ್ನು ಸಾಲ ತರುತ್ತಿದ್ದಳು. ಒಳಗೆ ಮಾತ್ರ ದಿನವೂ ಒಂದು ಕೋಳಿಯೋ ಅಥವಾ ಒಂದು ಬಾತೋ ಇಲ್ಲದೆ ಅಡಿಗೆಯೇ ಇಳಿಯುತ್ತಿರಲಿಲ್ಲ. ಇದನ್ನರಿತ ರೈತಸಂಘದವರು, ಅವನು ಸಂಪಾದಿಸಿದ ಹಣವನ್ನೆಲ್ಲಾ ಕಕ್ಕಿಸಿದ್ದಲ್ಲದೆ, ಶವದ ಪೆಟ್ಟಿಗೆಗಳನ್ನೂ, ಉಳಿದ ಮರವನ್ನೂ, ಭೂಸುಧಾರಣಾ ಕಾನೂನಿನ ಪ್ರಕಾರ ವಶಪಡಿಸಿಕೊಂಡರು.

ತಮ್ಮ ವಸ್ತುಗಳು ಹಾಳಾದರೂ ರೈತರಿಗೆ ದೊರಕದಿದ್ದರೆ ತಮಗೆ ಉಳಿತಾಯವೆಂದು ಜಮೀನ್ದಾರರು ಭಾವಿಸಿದಂತಿದ್ದಿತು. ಅದಕ್ಕಾಗಿ

ತಮ್ಮಲ್ಲಿದ್ದ ಒಳ್ಳೆಯ, ವಿಶೇಷ ಸಾಮಾನುಗಳನ್ನೆಲ್ಲಾ ಬೇಕಂತಲೇ ಹಾಳು ಮಾಡುತ್ತಿದ್ದರು. ಒಬ್ಬ ಜಮೀನ್ದಾರ ತನ್ನಲ್ಲಿದ್ದ ಸುಂದರವಾದ ಗಡಿಯಾರದ ಒಳಗಿರುವ ಯಂತ್ರವನ್ನು ನಾಶಮಾಡಿದರೆ, ಇನ್ನೊಬ್ಬ ಸಮರಾತ್ರಿಯಲ್ಲಿ ತಾನು ಸಂಗ್ರಹಿಸಿದ್ದ ದವಸದ ಮೂಟೆಗಳನ್ನು ಭಾವಿಯಲ್ಲಿ ಮುಳುಗಿಸುತ್ತಿದ್ದ. ಆದರೆ, ರೈತಸಂಘದ ಕಾರ್ಯಕರ್ತರಿಗೆ ಸಾವಿರ ಕಣ್ಣುಗಳಿದ್ದವೆಂಬುದನ್ನು ಮಾತ್ರ ಇವರು ಅರಿತಿರಲಿಲ್ಲವೆಂದು ಕಾಣುತ್ತದೆ.

ಲೋ-ಮೆಂಗ್-ಸಿಯಾಂಗ್ ಮಾಡಿದ ಅತ್ಯಾಚಾರವನ್ನರಿತ ಫು-ಚುವಾನ್, ಅವನ ಮನೆಗೆ ಹೋಗುವ ಮೊದಲು, ಅವನಿಗೆ ಶವದ ಪೆಟ್ಟಿಗೆಗಳನ್ನು ಮಾಡಿಕೊಟ್ಟ ಬಡಗಿ ಲೀಯೋ-ರ್ನಾನನ್ನು ಹಿಡಿದ. ಅವನು ೨ ಶವದ ಪೆಟ್ಟಿಗೆಗಳನ್ನಷ್ಟೇ ಅಲ್ಲ, ೨ ಜಂಟಿ ಗೋಡೆಗಳನ್ನು ಹಾಕಿಕೊಟ್ಟದ್ದಾಗಿಯೂ ಆತನಿಂದ ತಿಳಿಯಿತು. ಈ ಗುಟ್ಟನ್ನು ಮನಸ್ಸಿನಲ್ಲಿಟ್ಟುಕೊಂಡು, ಸಂಗ್ರಹಣ ದಳದವರು ಲೋ-ಮೆಂಗ್-ಸಿಯಾಂಗ್‌ನ ಮನೆಗೆ ಹೊರಟರು. ಎಂದಿನಂತೆ ಮನೆಯ ಸುತ್ತ ಕೆಲವರು ಕಾವಲು ನಿಂತರು. ಕೆಲವರು ಮನೆಯನ್ನು ಜಪ್ತಿಮಾಡಿದರು. ಚುನ್-ಸಿಂಗ್‌ಳು, ಲೋ-ಮೆಂಗ್-ಸಿಯಾಂಗ್‌ನ ಹೆಂಡತಿ, ತನ್ನ ಹೆಸರಿನಲ್ಲಿದ್ದ ಅಧಿಕಾರಪತ್ರಗಳನ್ನೆಲ್ಲಾ ಗಂಡನ ಆಸ್ತಿಯ ಜೊತೆಗೆ ವರ್ಗಾಯಿಸುವಂತೆ ಮಾಡಿದಳು. ಉಳಿದವರು ಸಾಮಾನುಗಳ ತನಿಖೆ ತೆಗೆದುಕೊಂಡರು. ಫು-ಚುವಾನ್‌ನು "ಇನ್ನೇನೂ ಇಲ್ಲವೆ ?" ಎಂದು ಕೇಳಿದನು.

"ನನ್ನಲ್ಲಿದ್ದ ತಾತ-ಮುತ್ತಾತಂದಿರ ಸ್ವತ್ತನ್ನೆಲ್ಲಾ ತೆಗೆದುಕೊಂಡಿರುವಿರಿ. ಇನ್ನೂ ನಿಮಗೆ ಅತೃಪ್ತಿಯೇ ?" ಎಂದು ಹೇಳುತ್ತಾ ಆ ಜಮೀನ್ದಾರ ಹೆಂಡತಿಯ ಕಂಕುಳಲ್ಲಿದ್ದ ತನ್ನ ಮಗುವಿನ ಕಡೆ ತೋರಿಸಿ, "ಇಗೋ ಈ ನನ್ನ ಮಗುವಿನ ಆಣೆ, ಇನ್ನೇನೂ ಇಲ್ಲ" ಎಂದನು.

"ಹಾಗೋ" ಎನ್ನುತ್ತ ಫು-ಚುವಾನನು ತನ್ನ ದಳದವರ ಕಡೆ ತಿರುಗಿ ತಲೆ ಅಲ್ಲಾಡಿಸಿದನು. ಅವರೆಲ್ಲ ನೇರವಾಗಿ ಮೂಲೆಯಲ್ಲಿದ್ದ ಕೋಳಿ ಗೂಡಿನ ಹತ್ತಿರ ಹೋದರು. ಅದನ್ನು ಒಂದು ಪಕ್ಕಕ್ಕೆ ಎಳೆಯುತ್ತಿರುವುದನ್ನು ಕಂಡ ಲೋ-ಮಿಂಗ್-ಸಿಯಾಂಗನ ಮುಖ ಬಿಳಿಚಿಕೊಂಡಿತು. ಫು-

ಚುವಾನನು ತಾನು ತಂದಿದ್ದ ಪಿಕಾಶಿಯಿಂದ ಗೋಡೆಗೆ ಬಡಿದು ಶಬ್ದಮಾಡಿದನು. ಜಮೀನ್ದಾರನ ಹೆಂಡತಿ ನಡುಗಿದಳು. ದಳದ ಸಿಪಾಯಿಗಳು ಭರ್ಜಿಗಳಮೇಲೆ ಊರಿ ನಿಂತು ಗೋಡೆಯಕಡೆಗೇ ನೋಡುತ್ತಿದ್ದರು. ಕೆಲವು ಇಟ್ಟಿಗೆಗಳು ಕಳಚಿದವು. ಒಂದು ಹಲಗೆಯು ಕಾಣಿಸಿಕೊಂಡಿತು. ಆ ಹಲಗೆಯನ್ನು ತೆಗೆದಮೇಲೆ ಒಂದು ದೊಡ್ಡ ಕರ್ಪೂರದ ಹಲಗೆಯ



ಕರ್ಪೂರದ ಹಲಗೆಯ ಪೆಟ್ಟಿಗೆಯ ಚಿಲಕವು ಕಾಣಿಸಿತು.

ಪೆಟ್ಟಿಗೆಯ ಚಿಲಕವು ಕಾಣಿಸಿತು. ಹೀಗೆ ಮರಣಸಂಕಟದಲ್ಲಿ ಜಮೀನ್ದಾರರು ತಮ್ಮ ಆಸ್ತಿಯನ್ನು ಬಚ್ಚಿಡಲು ಎಲ್ಲಾ ಉಪಾಯಗಳನ್ನೂ ಮಾಡುತ್ತಿದ್ದರು.

ಅಂತೂ ಸ್ಕಿ-ಲು ಹಳ್ಳಿಯ ಆಸ್ತಿಪಾಸ್ತಿಗಳ ಸಂಪೂರ್ಣಪಟ್ಟಿಯೊಂದು ಸಂಗ್ರಹಣ ಸಮಿತಿಯಿಂದ ತಯಾರಿಸಲ್ಪಟ್ಟಿತು. ಇನ್ನು ಆ ಸಾಮಾನುಗಳನ್ನು ಸಾಗಿಸುವುದು ಟಾ-ಮಿಂಗ್ ಮತ್ತು ಯೂ-ಲಿಯನ್‌ರ ಪಾಲಿಗೆ ಬಿತ್ತು. ಆಹಾರಪದಾರ್ಥಗಳು ಮತ್ತು ವ್ಯವಸಾಯ ಸಾಮಗ್ರಿಗಳು, ಜಮೀನ್ದಾರರಿಂದ ಕಿತ್ತುಕೊಂಡ ಕೆಲವು ಮನೆಗಳಲ್ಲಿ ಶೇಖರಿಸಲ್ಪಟ್ಟವು. ಕೋಳಿ ಮತ್ತಿತರ ಪ್ರಾಣಿಗಳು ಕೆಲವು ವ್ಯಕ್ತಿಗಳಿಗೆ ವಹಿಸಲ್ಪಟ್ಟವು. ಕೊನೆಗೆ ಪ್ರತಿಯೊಂದು ಪದಾರ್ಥವೂ ಇರುವ ಜಾಗವನ್ನು ವಿವರಿಸಿರುವ ಆ ಪಟ್ಟಿ 'ಹಂಚಿಕೆ ಸಮಿತಿ'ಯ ಕೈಸೇರಿತು.

ಕೆಲವು ಜಮೀನ್ದಾರರು ತಮ್ಮ ಅಹಾರಪದಾರ್ಥಗಳ ಬೆಲೆಯನ್ನು ಬೇರೆ ರೀತಿಯ 'ಚರಸ್ವತ್ತು'ಗಳ ರೂಪದಲ್ಲಿ ಕೊಡಬೇಕೆಂದರು. ರೈತಸಂಘ ಅದಕ್ಕೊಪ್ಪಿತು. ಸಾಗುವಣೆ ಸಮಿತಿಯು ಸಾಮಾನುಗಳನ್ನೆಲ್ಲಾ ಪಿತೃಪಕ್ಷದ ದೇವಸ್ಥಾನಕ್ಕೆ ಸಾಗಿಸಿದರು. ನಾನಾರೀತಿಯ ಒಡವೆಗಳು, ಔಷಧಿಗಳು, ಮೂಲಿಕೆಗಳು ಮತ್ತಿತರ, ಅಲ್ಲಿನ ರೈತರುಗಳು ಕಂಡರಿಯದ ಆಶ್ಚರ್ಯಕರವಾದ ವಸ್ತುಗಳೆಲ್ಲವೂ ತುಂಬಿದ್ದವು. ಸ್ಕಿ-ವು, ಇವುಗಳನ್ನು ನೋಡಿ ವ್ಯಂಗ್ಯ ನಗೆಯಿಂದ " ಇದು ಜಮೀನ್ದಾರರ ಜೀವನಕ್ರಮವನ್ನು ತೋರಿಸುವ ಪ್ರದರ್ಶನಾಲಯದಂತಿದೆ " ಎಂದನು.

'ಹಂಚಿಕೆ ಸಮಿತಿ'ಯ ಮೊಟ್ಟಮೊದಲನೆಯ ಕರ್ತವ್ಯ–'ಕಪ್ಪುನೆಲ' (ರೈತಸಂಘದವರ ಕಣ್ಣಿಗೆ ಬಿದ್ದು ಹಂಚಿಕೆಗೊಳಗಾಗದಿರಲೆಂದು ಮಾಲಿಕರ ಹೆಸರನ್ನು ಗೋಪ್ಯವಾಗಿಟ್ಟಿದ್ದ ಭೂಪ್ರದೇಶಗಳು) ವನ್ನು ಹುಡುಕುವುದು. ಹಳ್ಳಿಯಲ್ಲಿದ್ದ ಜಮೀನೆಲ್ಲ ಲೆಕ್ಕಕ್ಕೆ ಬರದಿದ್ದಲ್ಲಿ ಹಂಚಿಕೆ ಸರಿಹೋಗುತ್ತಿರಲಿಲ್ಲ. ಜಮೀನ್ದಾರರ ಆಸ್ತಿಯಬಗ್ಗೆ ಯಾವ ತೊಂದರೆಯೂ ಇರಲಿಲ್ಲ, ಏಕೆಂದರೆ, ವರ್ಗವಿಂಗಡಣೆಯ ಕಾಲದಲ್ಲೇ ಅವರ ಆಸ್ತಿಗಳ ಮಾಹಿತಿಯೆಲ್ಲ ಸಂಪೂರ್ಣವಾಗಿ ಹೊರಬಿದ್ದಿತು. ಆದರೆ ಮಧ್ಯಮವರ್ಗದ ರೈತರು—ಅದ

ರಲ್ಲೂ ಬಾಡಿಗೆದಾರ-ಮಧ್ಯಮರೈತರು—ತಮ್ಮ ಜಮೀನನ್ನು ಕೊಡದೆ ಹಿಂದಕ್ಕೆ ಸರಿಯುತ್ತಿದ್ದರು. ಅದಕ್ಕಾಗಿಯೇ ಲು-ಯಾಂಗ್‌ನು ಬಾಡಿಗೆ ದಾರ-ಮಧ್ಯಮರೈತರ ಸಭೆಯೊಂದನ್ನು ಕರೆಯಲು ತೀರ್ಮಾನಿಸಿದನು. ಕುವಾಂಗ್-ಲಿನ್‌ನೇ ಮೊದಲಾದ, ಜಮೀನ್ದಾರರ ವಿರುದ್ಧ ಕತ್ತಿ ಹಿರಿದು ನಿಂತಿದ್ದ ಮಧ್ಯಮರೈತರು, ಈಗ ತಮ್ಮ ಭೂಮಿಯೇ ವಿಭಜಿಸಲ್ಪಡುತ್ತಿರು ವುದನ್ನು ಕಂಡು, ಕೋಪದಿಂದ ಗೊಣಗತೊಡಗಿದರು. ಲು-ಯಾಂಗ್ ಅವರ ಮಾತನ್ನೆಲ್ಲಾ ಸಾವಕಾಶದಿಂದ ಕೇಳಿ, ಕೊನೆಗೆ ಅವರಿಗೆಲ್ಲಾ ಒಪ್ಪಿಗೆ ಯಾಗುವ ರೀತಿಯಲ್ಲಿ ಭೂಸುಧಾರಣೆಯನ್ನು ವಿವರಿಸಿದನು. ಜಮೀನ್ದಾರರ ಅಧಃಪತನವಾಗದಿದ್ದರೆ ಯಾರಿಗೂ ಕ್ಷೇಮವಿಲ್ಲವೆಂದೂ, ಸ್ವಂತ ಅನುಕೂಲ ಗಳಿಗಾಗಿ ದೇಶದ ಹಿತವನ್ನು ಬಲಿಕೊಡಬಾರದೆಂದೂ, ಜಮೀನಿನ ಪುನ ರ್ವ್ಯವಸ್ಥೆಯಾದಮೇಲೆ ಮಧ್ಯಮರೈತರಿಗೆ ಹಿಂದೆ ಅವರಲ್ಲಿದ್ದಷ್ಟೇ ಜಮೀನು ಸಿಕ್ಕುವುವೆಂದೂ ಮತ್ತು ಬೆಳೆಕಂದಾಯ ಒಂದನ್ನು ಸರ್ಕಾರಕ್ಕೆ ಕೊಟ್ಟು ಜಮೀನನ್ನು ಅನುಭವಿಸಬಹುದೆಂದೂ ತಿಳಿಸಿದನು.

ಹೀಗೆ ಮುಖ್ಯ ವಿಷಯಗಳನ್ನು ತಿಳಿಸಿ ಕೆಲಸದ ದಳದವರು ಮತ್ತು ರೈತರ ಬಳಗದವರು ಪ್ರಚಾರಕ್ಕೆ ತೊಡಗಿದರು. ಕೆಲವು ರೈತರಲ್ಲಿ ಇನ್ನೂ ಹುದುಗಿದ್ದ ಸ್ವಾರ್ಥತೆಯನ್ನು ಬೇರುಸಹಿತ ಕಿತ್ತರು.

ಸ್ಸೀ-ವೂ ಮತ್ತೊಂದು ವಿಷಯವನ್ನು ಗಮನಕ್ಕೆ ತಂದನು. ಭೂಮಿ ಯನ್ನು ಹಂಚುವಾಗ ಎಲ್ಲರಿಗೂ ಸಮನಾಗಿ ಹಂಚದೆ, ಅವರು ಫಸಲು ಮಾಡುವ ಶಕ್ತಿಯಮೇಲೆ ಮತ್ತು ದೈಹಿಕಶಕ್ತಿ-ಬಡತನಗಳನ್ನವಲಂಬಿಸಿ ಕೊಡತಕ್ಕದ್ದೆಂದನು. ಇದರ ಪ್ರಕಾರ, ತೀರ ಬಡವೆಯಾದ ಮತ್ತು ನಿಸ್ಸ ಹಾಯಕಳಾದ ಲೀ ಅಜ್ಜಿಗೂ, ತೀರ ಬಲಶಾಲಿಯಾಗಿ ಹೆಚ್ಚು ದುಡಿಯಬಲ್ಲ ಫು-ಚುವಾನ್‌ಗೂ, ಎಲ್ಲರಿಗಿಂತಲೂ ಶೇ. ೨೦ರಷ್ಟು ಹೆಚ್ಚು ಭೂಮಿ ಸಿಗು ವಂತಾಯಿತು.

ಒಮ್ಮೆ ಯೂ-ಚೆನ್‌ಳು ಮಗುವಿಗೆ ಹಾಲುಕೊಡುತ್ತಿದ್ದಾಗ ಒಂದು ವಿಷಯ ಹೊಳೆಯಿತು. ಸ್ಸೀ-ವುವನ್ನು ಕುರಿತು ಹೇಳಿದಳು: " ನಿನಗೆ ಸದ್ಯ ದಲ್ಲೇ ಒಂದು ಮಗು ಬೇರೆ ಹುಟ್ಟಲಿದೆ. ಆದುದರಿಂದ ಸ್ವಲ್ಪಭಾಗ ಜಮೀ

ನನ್ನು ಈಗಲೇ ಏಕೆ ಮಗುವಿಗಾಗಿ ಪಡೆಯಬಾರದು ?" ರೈತರೆಲ್ಲ 'ಅದು ಸರಿ' ಎಂದರು. ಆದರೆ ಸಿೞವು ಅದಕ್ಕೆ ಒಪ್ಪಲಿಲ್ಲ. ರೈತರೂ ಅಷ್ಟೇ ಆದರದಿಂದ ಬಲಾತ್ಕರಿಸತೊಡಗಿದರು. ಕೊನೆಗೆ ಲು-ಯಾಂಗನು ಎದ್ದು ನಿಂತು ವಿವರಣೆಯಿಾಯಬೇಕಾಯಿತು. 'ಕಾನೂನಿನ ಪ್ರಕಾರ ಜಮಿಾನಿನ ಹಂಚಿಕೆಯು ತಲೆಮೇರೆಯಂತೆ. ಒಬ್ಬ ಮನುಷ್ಯನು ಖಾಯಿಲೆಯಿಂದ ನರಳುತ್ತಿದ್ದು ಸಾಯುವ ಸ್ಥಿತಿಯಲ್ಲಿದ್ದರೂ, ಜಮಿಾನು ಹಂಚುವ ದಿನ ಅವನು ಬದುಕಿದ್ದರೆ, ಅವನಿಗೆ ಅವನ ಪಾಲಿನ ಜಮಿಾನು ಸಿಕ್ಕುತ್ತದೆ. ಅದರಂತೆಯೇ ಮಗುವಿಗೂ. ಜಮಿಾನು ಹಂಚುವ ದಿನ ಮಗು ಇನ್ನೂ ಹುಟ್ಟಿರದಿದ್ದರೆ, ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಾರದು' ಎಂದು ಅವರನ್ನು ಸಮಾಧಾನವಡಿಸಿದನು.

ಜಮಿಾನಿನಲ್ಲಿ ಅನೇಕ ಬಗೆಗಳಿದ್ದವು. ಮಣ್ಣಿನ ಗುಣ, ಜಮಿಾನಿನ ಆಕಾರ—ಇವು ವಿಧವಿಧವಾಗಿದ್ದುದರಿಂದ, ಎಷ್ಟೋ ವೇಳೆ ಒಂದೇ ಅಗಲ-ಅಳತೆಯ ಎರಡು ಜಮಿಾನುಗಳ ಉತ್ಪಾದನೆ ಭಿನ್ನವಾಗಿರುತ್ತಿದ್ದಿತು. ಅಲ್ಲದೆ ನಾನಾ ಆಕಾರ ಹೊಂದಿದ ಜಮಿಾನನ್ನು ಅಳೆಯುವುದೂ ಒಂದು ಕ್ಲಿಷ್ಟ ಸಮಸ್ಯೆಯೇ ಆಗಿತ್ತು. ಆದ್ದರಿಂದ ಜಮಿಾನುಗಳನ್ನು ಅವುಗಳ ಸರಾಸರಿ ಉತ್ಪಾದನೆಗೆ ತಕ್ಕಂತೆ ವಿಂಗಡಿಸುವುದೇ ಸೂಕ್ತವಾದ ಮತ್ತು ನ್ಯಾಯಬದ್ಧವಾದ ರೀತಿಯೆಂದು ನಿರ್ಧರಿಸಲಾಯಿತು. ಅದರಂತೆ ರೈತರು ತಮ್ಮ ಸ್ವಂತ ಜಮಿಾನುಗಳಲ್ಲಿ ಕೆಂಪುಬಾವುಟಗಳನ್ನೂ, ಇನ್ನೊಬ್ಬರಿಂದ ವಾರಕ್ಕೆ ಪಡೆಕೊಂಡ ಜಮಿಾನುಗಳಲ್ಲಿ ಬಿಳಿಯ ಬಾವುಟಗಳನ್ನೂ ಹಾಕಿದರು. ಬಾವುಟಗಳಮೇಲೆ ಬೆಳೆಯ ಪ್ರಮಾಣಗಳನ್ನು ಬರೆದರು. ಹೀಗೆ ಮಾಡಿದ್ದರಿಂದ ಹಂಚಿಕೆಯ ಅಧಿಕಾರಿಗಳಿಗೆ ಬಹುಬೇಗ ಮತ್ತು ಸುಲಭವಾಗಿ ಕಾರ್ಯ ಸಾಗಿಸಲು ಅನುಕೂಲವಾಯಿತು. ಬಾವುಟಗಳನ್ನು ನೆಡುವುದು ರೈತರಿಗೆ ಒಂದು ದೊಡ್ಡ ಸಮಾರಂಭವಾಯಿತು. ಎಲ್ಲರೂ ಸತ್ಯದಿಂದ ಬೆಳೆಯ ಪ್ರಮಾಣವನ್ನು ನಮೂದಿಸಿದರು. ಜಮಿಾನಿಲ್ಲದ ರೈತರು ಉಳ್ಳವರಿಗೆ ಗಳುಗಳನ್ನು ಸಿಗಿದು ಬಾವುಟ ಮಾಡಿಕೊಡುವುದರಲ್ಲಿ ನೆರವಾದರು.

ಮಾರನೆಯ ದಿನ ಬೆಳಿಗ್ಗೆ, ಸಿೞಲು ಹಳ್ಳಿಯ ಹೊಲಗದ್ದೆಗಳ

ಮೇಲೆಲ್ಲಾ ಎಲ್ಲಿ ನೋಡಿದರೂ ಸಣ್ಣಸಣ್ಣ ಬಾವುಟಗಳು ಗಾಳಿಯಲ್ಲಿ ಹಾರಾಡುತ್ತಿದ್ದವು. ಹಳ್ಳಿಯ ಪ್ರತಿಯೊಬ್ಬ ರೈತನೂ ತನ್ನ ಸಂಸಾರಸಮೇತ ಬಂದು 'ಬಾವುಟ ನೆಡುವ ಸಮಾರಂಭ'ದಲ್ಲಿ ಭಾಗಿಯಾದ. ಬಾವುಟ ನೆಡುತ್ತಾ ಒಬ್ಬ ರೈತ, "ಬೆಳೆಯ ಪ್ರಮಾಣವನ್ನು ಬೇಕೆಂತಲೇ ಕಮ್ಮಿ ಸೂಚಿಸಿ, ಅನಂತರ ಅಧ್ಯಕ್ಷ ಮಾಪೋರವರ ಮುಖವನ್ನು ಯಾವ ಧೈರ್ಯದಿಂದ ನೋಡಲಿ" ಎಂದು ಹೇಳುತ್ತಿದ್ದ. ಇನ್ನೊಬ್ಬ ತನ್ನ ಎದೆಗೆ ತಗುಲಿಸಿಕೊಂಡಿದ್ದ ರೈತಬಳಗದ ಸದಸ್ಯತನವನ್ನು ಸೂಚಿಸುವ ರೇಷ್ಮೆಯ ಟೇಪನ್ನು ತೋರಿಸುತ್ತಾ "ನಾನೇನಾದರೂ ತಪ್ಪು ಬರೆದು ದ್ರೋಹಬಗೆದಿದ್ದಲ್ಲಿ, ಈ ಕೆಂಪು ರೇಶ್ಮೆಯ ಟೇಪನ್ನು ತ್ಯಜಿಸಲು ಸಿದ್ಧ" ಎಂದು ತನ್ನ ಪ್ರಾಮಾಣಿಕತೆಯನ್ನು ಸಾಧಿಸುತ್ತಿದ್ದ.

ಬೆಳಿಗ್ಗೆ ಸುಮಾರು ೯ರ ಹೊತ್ತಿಗೆ, ಹಳ್ಳಿಯ ನಾಲ್ಕು ಸಣ್ಣ ಗುಂಪುಗಳ ಸದಸ್ಯರುಗಳೂ ಮತ್ತು ಭೂಸತ್ವವನ್ನಳೆಯಲೋಸುಗವೇ ನೇಮಿಸಿದ್ದ ಕೆಲವು ಅಧಿಕಾರಿಗಳೂ ಬಂದರು. ಆ ಅಧಿಕಾರಿಗಳಲ್ಲಿ ಬಹುಮಂದಿ ೫೦–೬೦ ವಯಸ್ಸಿನ ರೈತರುಗಳೇ ಆಗಿದ್ದರು. ಅವರಿಗೆಲ್ಲ ಭೂಮಿಯ ಸತ್ವವನ್ನು ಊಹಿಸಿ ಬೆಲೆಕಟ್ಟುವ ಕಲೆಯಲ್ಲಿ ತುಂಬಾ ಪರಿಶ್ರಮವಿದ್ದಿತು. ದನಕಾಯುವವನು ಹಸುವಿನ ಹಲ್ಲುಗಳನ್ನು ನೋಡಿ ಅದರ ವಯಸ್ಸನ್ನು ಹೇಳುವಂತೆ, ಇವರು ತಮ್ಮ ಮುಂದೆ ವಿಸ್ತಾರವಾಗಿ ಹರಡಿದ್ದ ಜಮೀನನ್ನು ಸೂಕ್ಷ್ಮ ದೃಷ್ಟಿಯಿಂದ ವೀಕ್ಷಿಸಿ ಬೆಲೆ ನಿರ್ಧರಿಸುತ್ತಿದ್ದರು. ಬಹುತೇಕ, ಅದು ರೈತರು ಹೇಳುವ ಬೆಲೆಗೆ ಸರಿಯಾಗಿರುತ್ತಿತ್ತು. ಆ ಅಂಕಿ ಅಂಶಗಳನ್ನು ಬಾವುಟದಲ್ಲಿ ಬರೆದು ತಮ್ಮ ಪುಸ್ತಕದಲ್ಲಿಯೂ ಬರೆದುಕೊಳ್ಳುತ್ತಿದ್ದರು.

ಅದೇ ಸಮಯದಲ್ಲಿ, ತಮ್ಮ ಹೋರಾಟದ ಫಲವಾಗಿ ಜಮೀನ್ದಾರರಿಂದ ವಶಪಡಿಸಿಕೊಂಡಿದ್ದ ಚಿತ್ರವಿಚಿತ್ರ ಸಾಮಾನುಗಳ ಪ್ರದರ್ಶನವೊಂದನ್ನು ರೈತಸಂಘದವರು ಏರ್ಪಡಿಸಿದರು. ಪೆಂಗ್-ಟಿಂಗ್ ಕಸಿದುಕೊಂಡಿದ್ದ ಭಾರಿ ಮನೆ ಇದಕ್ಕೆ ಅನುಕೂಲವಾಗಿ ಬಂತು. ಪೆಂಗ್-ಟಿಂಗನು ಆಗಾಗ್ಗೆ ಬಂದುಹೋಗುತ್ತಿದ್ದ ಜಪಾನೀ ಮಿಲಿಟರಿ ಅಧಿಕಾರಿಗಳಿಗೆ ಸತ್ಕಾರವೀಯುತ್ತಿದ್ದ ದೊಡ್ಡ ಕೊಠಡಿಯ ಮುಂಭಾಗದಲ್ಲಿ "ಜಮೀನ್ದಾರ ಜೀವನ

ರೀತಿಯನ್ನು ತೋರಿಸುವ ಪ್ರದರ್ಶನ'' ಎಂದು ಬರೆದಿದ್ದ ಒಂದು ಕೆಂಪು ಬಣ್ಣದ ಬಟ್ಟೆ ಕಟ್ಟಲ್ಪಟ್ಟಿದ್ದಿತು. ಸುಂದರವಾಗಿ ಅಲಂಕರಿಸಲ್ಪಟ್ಟ ಒಳ ಭಾಗದಲ್ಲಿ, ಚಿನ್ನ ಬೆಳ್ಳಿಯ ಬುದ್ಧನ ಪ್ರತಿಮೆಗಳು, ಕುಶಲ ಕೆತ್ತನೆ ಕೆಲಸದ ದಂತದ ಬೀಸಣಿಗೆಗಳು, ಬಹುಬೆಲೆಯ ಅನ್ನದ ಪಾತ್ರೆಗಳೇ ಮೊದಲಾದ ಶ್ರೀಮಂತಸಾಮುಗ್ರಿಗಳು ಇಡಲ್ಪಟ್ಟಿದ್ದವು. ಈ ವಸ್ತುಗಳ ಹೆಸರುಗಳಾಗಲೀ, ಅವುಗಳ ಉಪಯೋಗಗಳಾಗಲೀ ರೈತರಿಗೆ ಗೊತ್ತಿರಲಿಲ್ಲ. ಆದರೂ ತಾವು ಉಪಯೋಗಿಸುತ್ತಿದ್ದ ವಸ್ತುಗಳೊಡನೆ ಅವುಗಳ ತಾರತಮ್ಯವನ್ನು ಕಂಡು, ಅವರಿಗೆ ಕೋಪ ಮತ್ತು ದ್ವೇಷ ಬರದಿರಲಿಲ್ಲ. ಆ ಒಂದೊಂದು ಸಾಮಾನನ್ನು ನೋಡುತ್ತಲೂ, ಅವರು ಐಶ್ವರ್ಯವಂತರನ್ನು ಮನಸಾರೆ ಶಪಿಸುತ್ತಿದ್ದರು.

ಇಷ್ಟು ಕಾರ್ಯ ಸಾಧಿಸಿದಮೇಲೆ ದಳದ ನಾಯಕ ಚಿ-ಮಿನ್‌ನು ಸುತ್ತಮುತ್ತಲಿನ ೯ ಹಳ್ಳಿಗಳ ರೈತಕಾರ್ಯಕರ್ತರುಗಳ ಸಭೆ ಕರೆದನು. ಮೊದಲು, ಮೂರು ವಿಭಾಗಗಳಲ್ಲೂ ವಿಸ್ತರಿಸಿರುವ ಭೂಮಿಯ ಲೆಕ್ಕವನ್ನು ಪರಿಶೀಲಿಸಿದರು. ಮೂರನೆಯ ವಿಭಾಗದಲ್ಲಿ ಭೂಮಿ ಉಳಿದೆರಡಕ್ಕಿಂತ ಸ್ವಲ್ಪ ಕಡಿಮೆ ಇದ್ದಿತು. ಆದ್ದರಿಂದ ಮೊದಲನೆಯ ವಿಭಾಗದಿಂದ ೨೩ ಟಾರ್ ೫ ಟೌ ಭೂಮಿಯನ್ನು ಎರಡನೆಯದಕ್ಕೂ, ಎರಡನೆಯದರಿಂದ ೧೭ ಟಾರ್ ೪ ಟೌ ಭೂಮಿಯನ್ನು ಮೂರನೆಯದಕ್ಕೂ ವರ್ಗಾಯಿಸಬೇಕೆಂದು ತೀರ್ಮಾನಿಸಿದರು. ಹೀಗಾಗಿ ಯಾವ ವಿಭಾಗದಲ್ಲೇ ನೆಲಸಿರಲಿ, ಪ್ರತಿಯೊಬ್ಬ ರೈತನಿಗೂ ಸರಾಸರಿ ೨·೪ರಿಂದ ೨·೫ ಟೌ ಭೂಮಿ ದೊರಕುವಂತಾಯಿತು. ಇದೇರೀತಿ, ಹಳ್ಳಿಹಳ್ಳಿಗಳ ಗಡಿಪ್ರದೇಶಗಳಲ್ಲಿ ಬರಬಹುದಾದ ತೊಡಕು ಸಮಸ್ಯೆಗಳೂ ಸೂಕ್ತ ಚರ್ಚೆ–ವಿನಿಮಯಗಳಿಂದ ಬಗೆಹರಿಸಲ್ಪಟ್ಟವು.

* * * *

ಭೂಸುಧಾರಣೆ ಪ್ರಾರಂಭವಾಗಿ ಈಗಾಗಲೇ ೫೦ ದಿನಗಳು ಸಂದಿದ್ದವು. ಜಮಿನಿನ ಪುನರ್ವ್ಯವಸ್ಥೆ ಪೂರ್ಣವಾಯಿತು. ವರ್ಗವಿಂಗಡಣೆ ಪಟ್ಟಿಯನ್ನು ಒಂದು ಸಣ್ಣ ವಿಷಯವನ್ನೂ ಬಿಡದೆ ತಯಾರಿಸಿದ್ದರು. ಜಮೀನ್ದಾರರ ಆಸ್ತಿಯನ್ನು ವಶಪಡಿಸಿಕೊಂಡಿದ್ದರು. ಅವರು ಬಚ್ಚಿಟ್ಟುಕೊಂಡಿದ್ದ

ಆಸ್ತಿಯನ್ನು ಹೊರಗೆಡಹಿದ್ದರು. ಕೊನೆಯವರೆಗೂ ತಮ್ಮ ಗುರಿಯಲ್ಲಿ ಅಚಲವಾಗಿ ನಂಬಿಕೆಯಿಟ್ಟು, ಜಮಿನ್ದಾರರೊಡನೆ ಒಂದುಗೂಡದೆ,ಅವರು ತೋರಿಸಿದ ಸಣ್ಣಪುಟ್ಟ ಆಶೆಗಳಿಗಾಗಲೀ, ಹೆದರಿಕೆಗಾಗಲಿ, ಸೊಪ್ಪು ಹಾಕದೆ, ನಿರಂತರ ಹೋರಾಟ ನಡೆಸಿದ್ದರಿಂದಲೇ ರೈತರು ಇಷ್ಟನ್ನೂ ಸಾಧಿಸಲು ಸಾಧ್ಯವಾಯಿತು. ಭೂಮಿ ಹಂಚಿಕೆಯ ದಿನ ಇಡೀ ಹುಯಿಲುಂಗ್ ತಾಲ್ಲೂಕೇ ನಗುತ್ತಿರುವಂತೆ ತೋರುತ್ತಿತ್ತು. ಬಿರುಗಾಳಿ-ಮಳೆ ಮುಗಿದಿತ್ತು ಸೂರ್ಯ ಉದಯಿಸಿದ್ದ, ಮತ್ತು ಎಲ್ಲರ ಹೃದಯದಲ್ಲೂ ಸಂತೋಷ ತುಂಬಿತ್ತು. ರೈತನು ತಾನು ಪಟ್ಟ ಕಷ್ಟದ ಫಲವನ್ನು ತಾನೇ ಅನುಭವಿಸು ವಂತಾಯಿತು. ಎದೆ ಉಬ್ಬಿಸಿ, ಕೈ ಬೀಸಿ ನಡೆಯುತ್ತಾ, ತಾನು ಉತ್ತ ಭೂಮಿಯಮೇಲೆ ನಿಂತು "ಇದು ನನ್ನ ಭೂಮಿ" ಎಂದು ಹೆಮ್ಮೆಯಿಂದ ಹೇಳುವಂತಾಯಿತು. ದಿಗಂತದಲ್ಲಿ ಮೂಡುವ ಹೊಸ ಸ್ವರ್ಣಕಾಂತಿಯಂತೆ ಇಡೀ ಹಳ್ಳಿಯಲ್ಲಿ ನವಚೈತನ್ಯ-ಕಳೆ ಮೂಡಿತು.

* * * * *

ಆಗ ಜನವರಿ ತಿಂಗಳ ಕೊನೆಗಾಲ. ಯು-ಟ್ಯಾ, ಲು-ಯಾಂಗ್ ಮೊದಲಾದ ರೈತಬಳಗದ ಹಂಚಿಕೆಯ ಅಧಿಕಾರಿಗಳು, ಅಧ್ಯಕ್ಷ ಮಾವೋ ರವರ ಚಿತ್ರಪಟವಿದ್ದ ಮೇಜಿನ ಸುತ್ತ ಕುಳಿತಿದ್ದರು. ಅವರ ಸುತ್ತಲೂ ರೈತರು ಹುಲ್ಲಿನಿಂದ ಬೆಂಕಿಮಾಡಿ ಕಾಯಿಸುತ್ತಾ ಕುಳಿತಿದ್ದರು. ಸ್ವಾತಂತ್ರ್ಯ ದಿಂದ ಕಳೆಯೇರಿದ್ದ ಅವರ ಮುಖಗಳಮೇಲೆ ಕೆಂಜ್ವಾಲೆಯ ಬೆಳಕು ನಲಿ ಯುತ್ತಿತ್ತು. ಆಗಾಗ್ಗೆ, ಪ್ರತಿಯೊಬ್ಬ ರೈತನೂ, ಒಬ್ಬೊಬ್ಬನಾಗಿ ಮುಂದೆ ಬಂದು ತನ್ನ ಮನೆಯಲ್ಲಿದ್ದ ಜನಗಳ ಸಂಖ್ಯೆ, ಅವನಲ್ಲಿದ್ದ ಭೂಮಿ ಮತ್ತು ವ್ಯವಸಾಯ ಉಪಕರಣಗಳಬಗ್ಗೆ ವರದಿ ಮಾಡುತ್ತಿದ್ದ. ಆಗ ಕಾರ್ಯ ಕರ್ತರು ಖಾತೆಯನ್ನು ತೆರೆದು ನೋಡಿ, ಆ ರೈತನಿಗೆ ಎಷ್ಟು ಭೂಮಿ ಸಲ್ಲ ಬಹುದೆಂದು ಓದಿಹೇಳುತ್ತಿದ್ದರು. ನೆರೆದಿದ್ದ ರೈತಸಮೂಹ ಅಲ್ಲೇ ತಮ್ಮ ಅಭಿಪ್ರಾಯಗಳನ್ನು ಹೇಳಬಹುದಿತ್ತು. ಆ ರೈತನೇ ತನ್ನ ವೈಯುಕ್ತಿಕ ಸಲಹೆಗಳನ್ನು ನೀಡಲೂ ಅವಕಾಶವಿದ್ದಿತು. ವಯಸ್ಸಾದ ರೈತರಿಗೆ ಸಮೀ ಪದ ಭೂಮಿಯೂ, ನೀರಿನ ಚಕ್ರದ ಅನುಕೂಲವಿದ್ದವರಿಗೆ ಎತ್ತರದ

ಜಮೀನೂ ಕೊಡಲ್ಪಟ್ಟವು. ವ್ಯವಸಾಯ ಸಾಮುಗ್ರಿ ಇಲ್ಲದವರು, ಕೇಳಿ ಹೊಸ ಉಪಕರಣಗಳನ್ನು ಪಡೆಯಬಹುದಿತ್ತು

ಫು-ಚುವಾನ್‌ನ ಸರದಿ ಬಂತು. ಸಂಸಾರದಲ್ಲಿ ಎಷ್ಟು ಮಂದಿ? "ಒಬ್ಬನೇ—ನಾನೊಬ್ಬನೇ." ಭೂಮಿ—ಕಾಣಿ? "ಏನೂ ಇಲ್ಲ." ವ್ಯವಸಾಯ ಸಾಮುಗ್ರಿಗಳು "ಯಾವುವೂ ಇಲ್ಲ." ನೆರದಿದ್ದ ರೈತಸಮೂಹದ ಒತ್ತಾಯದಂತೆ, ಆತನಿಗೆ ಇಮ್ಮಡಿ ಜಮೀನು ಮತ್ತಿತರ ವಸ್ತುಗಳು ದೊರೆತವು.

ಜನರು ಫು-ಚುವಾನ್‌ನ ಅದೃಷ್ಟಕ್ಕಾಗಿ ಅಭಿನಂದಿಸುತ್ತಿರುವಾಗ ಯು-ಲಿಯನ್ ಭುಜಗಳ ಮೇಲಿದ್ದ ಹಿಮದ ಚೂರುಗಳನ್ನು ಒದರುತ್ತಾ "ಅಣ್ಣಾ ಸಿ-ವೂ, ಅಣ್ಣಾ ಸಿ-ವೂ" ಎಂದು ಕೂಗಿಕೊಂಡು ಒಳಗೋಡಿ ಬಂದಳು. ಸಿ-ವು, ಖಾತೆಯಲ್ಲಿ ಏನೋ ಬರೆಯುತ್ತಿದ್ದವನು ತಲೆ ಎತ್ತಿದನು. "ಬೇಗ ಮನೆಗೆ ಹೋಗು. ಒಬ್ಬ ಸೂಲಗಿತ್ತಿಯನ್ನು ಕರೆದು ಕೊಂಡು ಹೋಗು. ನಿನ್ನಹೆಂಡತಿಗೆ ಪ್ರಸವ ವೇದನೆ ತೀವ್ರವಾಗಿದೆ." ಎಂದು ಕೈಯಾಡಿಸುತ್ತಾ ದೊಡ್ಡ ಧ್ವನಿಯಲ್ಲಿ ಹೇಳಿದಳು.

ಸಿ-ವು ಕೂಡಲೇ ತನ್ನ ಮುಂದಿದ್ದ ಕಾಗದಗಳನ್ನು ಪಕ್ಕದಲ್ಲೇ ಕುಳಿತಿದ್ದ ಅಧಿಕಾರಿಯ ಕಡೆಗೆ ತಳ್ಳಿ ಜನಗಳ ಮಧ್ಯೆ ದಾರಿ ಬಿಡಿಸಿಕೊಂಡು ಹೊರಬಿದ್ದ. ಟು-ಯಾ-ಚೆನ್ ಕೂಡ ಮುಂದಿನದು ತನ್ನ ಸರದಿಯೇ ಎಂಬುದನ್ನು ಮರೆತು ಕಂಕುಳಲ್ಲಿದ್ದ ಮಗುವನ್ನು ತನ್ನ ಅತ್ತೆಯ ಕೈಗಿತ್ತು ಸಿ-ವುಗೆ ಸಹಾಯ ನೀಡಲು ತಕ್ಷಣವೇ ಹೊರಟಳು.

ರಾತ್ರಿ ಎರಡು ಘಂಟೆಯಾಗಿದ್ದರೂ ಕಾರ್ಯಕರ್ತರು ಖಾತೆಯ ಕೆಲಸದಲ್ಲಿ ತೊಡಗಿದರು. ಚುನ್-ಸಿಂಗಳು ಒಂದು ದೊಡ್ಡ ಪಾತ್ರೆಯಲ್ಲಿ ಬಿಸಿಯಾದ ಘಮ ಘಮಿಸುವ ಅನ್ನವನ್ನು ತಂದು ಮೇಜಿನ ಮೇಲಿಟ್ಟು "ನೀವೆಲ್ಲಾ ತುಂಬ ದಣಿದಿರಬೇಕು. ಸ್ವಲ್ಪ ಊಟ ಮಾಡಿ" ಎಂದು ಉಪಚರಿಸಿದಳು. ಅಧಿಕಾರಿಗಳು ಒಡನೆಯೇ ಒಪ್ಪಿಕೊಳ್ಳಲು ಹಿಂಜರಿದರು, ಏಕೆಂದರೆ ಅವರಿಗೆ ಗೊತ್ತಿತ್ತು. ಲೀ-ಅಜ್ಜಿಯು ಅಷ್ಟು ಜನರಿಗೂ

ಅನ್ನ ಒದಗಿಸುವಷ್ಟು ಶಕ್ತ್ಯಳಲ್ಲವೆಂದು. ಆದರೆ, ಅಜ್ಜಿಯೇ ಊರು ಗೋಲಿನ ಮೇಲೆ ಒರಗಿಕೊಂಡು "ತಿನ್ನೀಪ್ಪಾ, ತಿನ್ನಿ. ಇಲ್ಲದಿದ್ದರೆ ನಮಗೆಲ್ಲ ತುಂಬ ದುಃಖವಾಗುತ್ತೆ. ಹೊಸವರ್ಷಕ್ಕೆಂದು ಈ ಅಕ್ಕಿಯನ್ನು ಕೂಡಿಸಿಟ್ಟಿದ್ದೆವು. ಆದರೆ ಇಂದು, ಮೊಟ್ಟಮೊದಲಿಗೆ ಬಡಜನರು ತಮ್ಮದೇ ಆದ ಜಮೀನು ಪಡಕೊಂಡಿದ್ದಾರೆ. ಇದು ನೂರಾರು–ಸಾವಿರಾರು ವರ್ಷಗಳಿಗಿಂತ ಶ್ರೇಷ್ಠವಾದುದಲ್ಲವೇ ?" ಎಂದು ಒತ್ತಾಯಮಾಡಿದಳು. ಅಧಿಕಾರಿಗಳು ಒಪ್ಪಲೇ ಬೇಕಾಯಿತು. ಎಲ್ಲರೂ ಊಟದಗಲಾಟೆಯಲ್ಲಿದ್ದಾಗ ಯೂ-ಚೆನ್ ಓಡಿಬಂದು "ಅತ್ತಿಗೆಗೆ ಅವಳಿ-ಜವಳಿ ಮಕ್ಕಳು ಹುಟ್ಟಿವೆ, ಒಂದು ಗಂಡು, ಒಂದು ಹೆಣ್ಣು" ಎಂದು ಕೂಗಿಕೊಂಡಳು. ಯೂ-ಚೆನ್‌ಳ ಸುತ್ತ ಜನರೆಲ್ಲರೂ ಗುಂಪು ಕೂಡಿದರು. ಅವರ ಆನಂದ-ಉತ್ಸಾಹಕ್ಕೆ ಪಾರವೇ ಇಲ್ಲವಾಯಿತು.

ಸಿ-ವು ಸ್ವಲ್ಪ ಹೊತ್ತಿನ ಮೇಲೆ ಮರಳಿ ಬಂದನು. ಹಸನ್ಮುಖಿಯಾಗಿ ಎಲ್ಲರೂ ಅರ್ಪಿಸಿದ ಧನ್ಯವಾದಗಳನ್ನು ವಂದನಾ ಪೂರ್ವಕವಾಗಿ ಸ್ವೀಕರಿಸುತ್ತಾ ಆ ಕಡೆ ಈ ಕಡೆ ಬಾಗುತ್ತಾ ಒಂದು ಕುರ್ಚಿಯ ಮೇಲೆ ಕುಳಿತನು. ಎಲ್ಲವನ್ನೂ ಮರೆತವನಂತೆ, ಖಾತೆ ಬರೆಯುವ ಕೆಲಸದಲ್ಲಿ ಮತ್ತೆ ನಿರತನಾದನು.

* * * * *

ಮಾರನೆಯ ದಿನ ಬೆಳಕು ಹರಿಯುವ ಮುನ್ನ, ರೈತರು ತಮಗೆ ಹೊಸದಾಗಿ ದೊರೆತ ಹೊಲ-ಗದ್ದೆಗಳನ್ನು ನೋಡಲು ಹೊರಟರು. ಮಂಜು ಮುಸುಕಿದ ಹೊಲಗಳನ್ನು ದಿಟ್ಟಿಸಿ ನೋಡುತ್ತಾ, ಎಷ್ಟು ಬೀಜ ಬೇಕಾಗುವುದು, ಎಷ್ಟು ಗೊಬ್ಬರ ಬೇಕಾಗುವುದು ಎಂದು ಯೋಚಿಸ ತೊಡಗಿದರು. ಕೆಲವರು ಅಷ್ಟು ಹೊತ್ತಿಗಾಗಲೇ ತಮ್ಮ ಹೊಲಗಳಿಗೆ 'ವಿಜಯ' 'ವಿಮೋಚನೆ' ಮೊದಲಾದ ಹೆಸರುಗಳನ್ನಿಟ್ಟಿದ್ದರು. ಅದರ ಜೊತೆಯಲ್ಲೇ, ಹೊಲದ ಹೊಸ ಮಾಲೀಕನ ಹೆಸರೂ, ತಾರೀಖೂ ಬರೆಯಲ್ಪಟ್ಟಿದ್ದವು.

ಅದೇ ದಿನ ಮಧ್ಯಾಹ್ನ ಎರಡು ಘಂಟೆಗೆ 'ಬಿಡುಗಡೆಯ ಮಹೋತ್ಸವ'ದ ಸಭೆ ಪಿತೃ ದೇವಸ್ಥಾನದಲ್ಲಿ ಸೇರಿತು. ಮೊದಲನೆಯ ವಿಭಾಗಕ್ಕೆ

ಸೇರಿದ ಮೂರು ಹಳ್ಳಿಗಳ ಆಶ್ರಯದಲ್ಲಿ ಈ ಉತ್ಸವ ಏರ್ಪಟ್ಟಿದ್ದಿತು. ದೇವಸ್ಥಾನದ ಮುಂದೆ ದೊಡ್ಡ ಚಪ್ಪರವನ್ನು ಹಾಸಿದ್ದರು. ಚಪ್ಪರದ ಒಂದು ಭಾಗದಲ್ಲಿ ''ಭೂಮ್ಯಾಕಾಶಗಳು ಕಲಿಕೆಳಕಾದವು—ಪಾಳೆಗಾರ ಪದ್ಧತಿ ನಾಶವಾಯಿತು" ಎಂದೂ, ಇನ್ನೊಂದು ಭಾಗದಲ್ಲಿ "ಅಮೇರಿಕಾ ದೇಶಕ್ಕೆ ಧಿಕ್ಕಾರ—ಕೊರಿಯಾ ದೇಶಕ್ಕೆ ಸಹಾಯ" ಎಂದೂ, ಮತ್ತೊಂದು ಭಾಗದಲ್ಲಿ ದೊಡ್ಡ ಅಕ್ಷರಗಳಲ್ಲಿ "ಪ್ರಪಂಚದ ರೈತರೆಲ್ಲರೂ ಸಹೋದರ-ಸಹೋದರರು"ಎಂದೂ ಬರೆದಿದ್ದಿತು.

ಉತ್ಸವವು ಬೆಳಿಗ್ಗೆ ಹತ್ತು ಘಂಟೆಗೇ ಪ್ರಾರಂಭವಾಯಿತು. ಗುಂಪು-ಗುಂಪಾಗಿ ರೈತರುಗಳು ಭರ್ಜಿಗಳನ್ನು ಹಿಡಿದುಕೊಂಡೋ, ಅಥವಾ ಜಾಗಟೆ-ತಮಟೆಗಳನ್ನು ಬಡಿದುಕೊಂಡೋ ಬರತೊಡಗಿದರು. ಪ್ರಾಥಮಿಕ ಶಾಲೆಯ ಮಕ್ಕಳು ಮೆರವಣಿಗೆಯ ಮುಂದಿದ್ದರು. ಅವರೆಲ್ಲ ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿದ್ದರು. ತಲೆಗೆ ಚೌಕಗಳನ್ನು ಸುತ್ತಿಕೊಂಡು ಚಿಮ್ಮಿ ನೆಗೆದಾಡುತ್ತಾ ಬರುತ್ತಿದ್ದರು. 'ತರುಣ ವೀರ'ರ ದಳಕ್ಕೆ ಸೇರಿದ ಕೆಲವರು ಕೆಂಪು ಬಣ್ಣದ ಕತ್ತಿನ ಪಟ್ಟಿಯನ್ನು ಧರಿಸಿದ್ದರು.

ವೇದಿಕೆಯ ಮೇಲೆ ಎರಡು ಪಲ್ಲಕ್ಕಿಗಳನ್ನಿಟ್ಟು, ಬಣ್ಣ ಬಣ್ಣದ ರೇಷ್ಮೆಯ ಬಟ್ಟೆಗಳಿಂದ ಅಲಂಕರಿಸಿದ್ದರು. ಮೊದಲನೆಯ ಪಲ್ಲಕ್ಕಿಯಲ್ಲಿ ರಾಷ್ಟ್ರಾಧ್ಯಕ್ಷ ಮಾವೋ, ಸೇನಾನಾಯಕ ಚು-ಟೇ, ಉಪಾಧ್ಯಕ್ಷ ಲಿಯು-ಪಾವೋ-ಚಿ ಮತ್ತು ಪ್ರಧಾನಿ ಚೌ-ಎನ್-ಲೈ ರವರ ಭಾವಚಿತ್ರಗಳಿದ್ದವು, ಮತ್ತೊಂದರಲ್ಲಿ ಮಾರ್ಕ್ಸ್, ಎಂಗಲ್ಸ್, ಲೆನಿನ್ ಮತ್ತು ಸ್ಟಾಲಿನ್‌ರ ಭಾವಚಿತ್ರಗಳಿದ್ದವು.

ಸಭೆ ಪ್ರಾರಂಭವಾಗುವ ಮುನ್ನ ರೈತರ ಬಳಗದವರು, ಜಮೀನ್ದಾರರಿಂದ ವಶಪಡಿಸಿಕೊಂಡಿದ್ದ ಕರಾರು ಪತ್ರಗಳನ್ನೆಲ್ಲಾ ತಂದು ಆವರಣದಲ್ಲಿ ರಾಶಿಹಾಕಿದರು. ಆ ಕರಾರು ಪತ್ರಗಳಲ್ಲಿ ನಾನಾಪ್ರಕಾರಗಳಿದ್ದವು. ನಿರಕ್ಷರಕುಕ್ಷಿಗಳಾದ ರೈತರಿಂದ ಬಲಾತ್ಕಾರವಾಗಿ ಬರೆಸಿಕೊಂಡು ಆ ಕರಾರು ಪತ್ರಗಳು ಊಹೆಗೂ ಮೀರುವಷ್ಟು ಕ್ರೂರವಾಗಿದ್ದವು. ''ಅಧಿಕವೊತ್ತದ ಕರಾರಿ''ನ ಪ್ರಕಾರ ರೈತ ಐದು ಟಾ ಭೂಮಿಯನ್ನು ಬಾಡಿಗೆಗೆ ತೆಗೆದು

ಕೊಂಡಿದ್ದರೂ ಏಳು ಟಾ ಎಂದು ಬರೆದು ಕೊಡಬೇಕು. ಮತ್ತು ಅದರ ಪ್ರಕಾರ ಬಾಡಿಗೆ ಸಲ್ಲಿಸಬೇಕು. ''ನಿರ್ದಿಷ್ಟಬಾಡಿಗೆ'' ಕರಾರಿನ ಪ್ರಕಾರ ರೈತನಿಗೆ ಎಷ್ಟೇ ಕಷ್ಟವಾಗಿರಲಿ, ಬೆಳೆ ಬರಲಿ-ಬರದಿರಲಿ ಅವನು ಕೊಡಬೇಕಾದ ನಿಗದಿಯ ಹಣವನ್ನು ಸಲ್ಲಿಸಲೇಬೇಕು. 'ಅನಿರ್ದಿಷ್ಟ ಬಾಡಿಗೆ'ಯ ಕರಾರು ಪತ್ರಗಳೂ ಇದ್ದವು. ಇದರ ಪ್ರಕಾರ ಬೆಳೆ ಬಾರದ ವರ್ಷ, ರೈತ ಜಮೀನ್ದಾರನಿಗೆ ಒಂದು ಸತ್ಕಾರ ಸಮಾರಂಭವೇರ್ಪಡಿಸಬೇಕು. ಅವನು ಬಂದು ಬೆಳೆಯನ್ನು ನೋಡಿ ಬಾಡಿಗೆಯನ್ನು ಕಡಿಮೆ ಮಾಡಿದರೂ ಮಾಡಬಹುದು, ಅಥವಾ ಹೆಚ್ಚಿಸಲೂಬಹುದು. ಎಲ್ಲವೂ ಅವನ ಇಚ್ಛೆಗೆ ಬಿಟ್ಟುದಾಗಿತ್ತು. ಎಷ್ಟೋವೇಳೆ ಅವನು ಬಿಟ್ಟುಕೊಟ್ಟ ಬಾಡಿಗೆಹಣ, ಅವನ ಸತ್ಕಾರಸಮಾರಂಭಕ್ಕೆ ಮಾಡಿದ ಖರ್ಚಿನಷ್ಟು ಇರುತ್ತಿರಲಿಲ್ಲ. ಈ ಎಲ್ಲ ಕರಾರುಪತ್ರಗಳನ್ನು ನೋಡುತ್ತಲೇ ರೈತರ ಕಣ್ಣುಗಳು ನೋವು ಮತ್ತು ದ್ವೇಷದಿಂದ ಕೆಂಡದಂತೆ ಕೆಂಪಾದವು. ಈ ಕರಾರು ಪತ್ರಗಳ ರಾಶಿಯ ಸುತ್ತಲೂ ಐದು ಅಡಿ ಉದ್ದದ ಬಾಣಬಿರುಸುಗಳು ಒಟ್ಟಿದ್ದವು.

ಹೆಚ್ಚುಹೆಚ್ಚು ಜನ ಸೇರಿದಂತೆ ಜಾಗಟೆ-ತಮಟೆಗಳ ಸದ್ದೂ ಹೆಚ್ಚತೊಡಗಿತು. ಸಿಚ್ಚಿಯೋ ಹಳ್ಳಿಯ ರೈತರು 'ಘಟಸರ್ಪನೃತ್ಯ' ಏರ್ಪಡಿಸಿದ್ದರು. ಆ ಕಾಲ್ಪನಿಕ ಪ್ರಾಣಿಯು ೫೦ಅಡಿ ಉದ್ದವಿತ್ತು. ಅದರ ದವಡೆಗಳು ಮೇಲೆ-ಕೆಳಗೆ ಆಡುವುದೂ ತಾಮ್ರದ ತಂತಿಯಿಂದ ಹೆಣೆದ ಅದರ ಮೀಸೆಗಳು ತಿರುಗುವುದೂ ಭಯಂಕರವಾಗಿ ಕಾಣುತ್ತಿತ್ತು. ಯೂನು ಹಳ್ಳಿಯವರು ತಮಟೆಯ ಕುಣಿತವನ್ನು ಮಾಡಿದರು. ಸಿ-ಲು ಹಳ್ಳಿಯವರು ಬೆಸ್ತರ ನರ್ತನವನ್ನು ಪ್ರದರ್ಶಿಸಿದರು. ಚುನ್-ಸಿಂಗಳು ನೀಲಿಬಣ್ಣದ ರವಿಕೆ ತೊಟ್ಟು ಮೀನಿನ ಪಾತ್ರವಹಿಸಿದ್ದಳು. ಯು-ಲಿಯನ್ ಬೆಸ್ತನ ವೇಷ ತೊಟ್ಟು ಮೀನನ್ನು ಹಿಡಿಯುವವಳಂತೆ ಬಲೆ ಬೀಸುತ್ತ ನರ್ತನ ಮಾಡಿದಳು.

ಪ್ರಾಥಮಿಕಶಾಲೆಯ ವಿದ್ಯಾರ್ಥಿಗಳು ರಾಷ್ಟ್ರಗೀತೆಯನ್ನು ಹಾಡಿದರು. ಎಲ್ಲರೂ ರಾಷ್ಟ್ರಧ್ವಜಕ್ಕೂ, ಅಧ್ಯಕ್ಷ ಮಾ-ವೋರವರ ಚಿತ್ರಪಟಕ್ಕೂ ಬಾಗಿ ನಮಸ್ಕರಿಸಿದರು. ಮೂರು ಬಳಗಗಳ ಅಧ್ಯಕ್ಷರುಗಳು, ಮಹಿಳಾಸಂಘದ

ಅಧ್ಯಕ್ಷಿಣಿ, ಜನಸೈನ್ಯದ ದಳಪತಿ ಮತ್ತು ೩ ಹಳ್ಳಿಗಳ ಗ್ರಾಮಾಧ್ಯಕ್ಷರನ್ನೊಳಗೊಂಡ ಅಧ್ಯಕ್ಷವೃಂದವು ವೇದಿಕೆಯನ್ನಲಂಕರಿಸಿತು. ಕಾರ್ಯಕಲಾಪಗಳು ಪ್ರಾರಂಭವಾದವು.

ಎಂದೂ ಬಹಿರಂಗಸಭೆಗಳಲ್ಲಿ ಮಾತನಾಡದಿದ್ದ ರೈತರೆಲ್ಲರೂ ವೇದಿಕೆಯನ್ನೇರಿ ನಾನಾರೀತಿಯ ಪ್ರತಿಜ್ಞೆಗಳನ್ನು ಮಾಡಿದರು. ಲಿ-ಚೆ-ನಾ ತಾನು ಹೆಚ್ಚುಬೆಳೆ ಬೆಳೆಯುವೆನೆಂದೂ, ಕೆರೆ ಏರಿಯನ್ನು ಸರಿಮಾಡುವ ಕೆಲಸದಲ್ಲಿ ಭಾಗಿಯಾಗುವೆನೆಂದೂ ಪ್ರಮಾಣಮಾಡಿದ. ಷು-ಮೀ, ಕೆರೆ ಏರಿ ನಿರ್ಮಿಸುವುದರಲ್ಲಿ ಹೆಂಗಸರೂ ಸಮಭಾಗಿಗಳಾಗಬೇಕು, ಏಕೆಂದರೆ ಭೂಮಿಯ ಹಂಚಿಕೆಯಲ್ಲಿ ಅವರಿಗೂ ಗಂಡಸರಂತೆ ಸಮಭಾಗ ದೊರೆತಿದೆ ಎಂದು ವಾದಿಸಿದಳು. ಕೊನೆಯಲ್ಲಿ ಫು-ಚುವಾನನೂ ಹಿಡಿಸಲಾರದಷ್ಟು ಸಂತೋಷದಿಂದ ವೇದಿಕೆಯ ಮೇಲೆ ನಿಂತು ಹೆದರಿಕೆಯಿಂದ ಬಲಗೈಬೆರಳುಗಳಿಂದ ಟೋಪಿಯ ಅಂಚನ್ನು ತಿರುವುತ್ತಾ "ನನಗೆ ಕೆಸರಿನಲ್ಲಿ ಉಳುವುದು ಮಾತ್ರ ಗೊತ್ತು. ಮಾತನಾಡುವುದು ಬರುವುದಿಲ್ಲ. ನಾವು ಭಾವಿಯ ನೀರನ್ನು ಕುಡಿದು ಬಾಯಾರಿಕೆಯನ್ನು ಹೋಗಲಾಡಿಸಿಕೊಂಡಾಗ ಭಾವಿಯನ್ನು ತೋಡಿದ ಪುಣ್ಯಾತ್ಮನ ನಾಮಸ್ಮರಣೆ ಮಾಡುವುದಿಲ್ಲವೇ; ಹಾಗೆಯೇ ಇಂದು ನಾವು ಬಂಧವಿಮುಕ್ತರಾದಾಗ ಅದಕ್ಕೆ ಕಾರಣವಾದ ಕಮ್ಯೂನಿಸ್ಟ್ ಪಾರ್ಟಿಯನ್ನು ಮರೆಯಲು ಸಾಧ್ಯವೇ ? ಅಧ್ಯಕ್ಷ ಮಾವೋ ಮತ್ತು ಕಮ್ಯೂನಿಸ್ಟ್ ಪಾರ್ಟಿ ಇಲ್ಲದಿದ್ದರೆ ನಾನು ಎಲ್ಲಿರುತ್ತಿದ್ದೆ ? ಇನ್ನೂ ಪೆಂಗ್-ಎರುವಿನ ಕಾಲಕೆಳಗೆ ಒದ್ದಾಡುತ್ತಿರಲಿಲ್ಲವೆ ?" ಎಂದು ಹೇಳಿದನು.

ಎಲ್ಲ ರೈತರೂ ಒಮ್ಮೆಲೇ ತಮ್ಮ ತೋಳುಗಳನ್ನು ಎತ್ತಿ ಒಂದೇ ಧ್ವನಿಯಲ್ಲಿ ಸಮುದ್ರದ ಅಲೆಗಳು ಘರ್ಜಿಸುವಂತೆ ಘೋಷಿಸಿದರು :

'' ಚಿರಾಯುವಾಗಲಿ ಕಮ್ಯೂನಿಸ್ಟ್ ಪಾರ್ಟಿ !''

'' ರೈತರ ರಕ್ಷಕ ಮಾವೋ-ಟ್ಸೆ-ಟುಂಗ್ ದೀರ್ಘಾಯುವಾಗಲಿ''

ಪುನಃ ನಿಶ್ಶಬ್ದವಾದಾಗ ಫು-ಚುವಾನ್ ಮುಂದುವರೆಸಿದ :

" ಜಮೀನ್ದಾರರೂ ಮತ್ತು ಸಾಮ್ರಾಜ್ಯವಾದಿಗಳೂ ಒಂದೇ" ಎಂದು ಇಂದು ನನಗೆ ಗೊತ್ತಾಗಿದೆ. ನನ್ನ ತಂದೆ ಈ ಜಮೀನ್ದಾರರ ಕ್ರೌರ್ಯಕ್ಕೆ

ತುತ್ತಾಗಿ ಸತ್ತ. ಆಗಿನ್ನೂ ನಮ್ಮ ಕಣ್ಣು ತೆರೆಯಲು ಕಮ್ಯೂನಿಸ್ಟ್‌ಪಾರ್ಟಿ ಬಂದಿರಲಿಲ್ಲ. ಈಗ ಎಲ್ಲ ಬದಲಾಗಿದೆ. ಜಪಾನ್ ಮಾಡಿದ್ದನ್ನೇ ಅಮೆರಿಕಾವೂ ಮಾಡಲಿಚ್ಛಿಸಿ, ನಮ್ಮನ್ನು ಹಿಂದಕ್ಕೆ ತಳ್ಳಲು ಯತ್ನಿಸಿದರೆ ನಾವೆಲ್ಲ ಎಚ್ಚೆತ್ತು ಅವರನ್ನು ನಿರ್ಮೂಲಮಾಡುತ್ತೇವೆ—ಅಮೆರಿಕನ್ ಸಾಮ್ರಾಜ್ಯ ಶಾಹಿಯನ್ನಷ್ಟೇ ಅಲ್ಲ, ಟೈವಾನ್‌ನಲ್ಲಿ ಸೇರಿಸಿಕೊಂಡಿರುವ ದೇಶದ್ರೋಹಿ ಗಳನ್ನೂ !"

ರೈತರು ಮೊಳಗಿಸಿದ ಘೋಷಣೆಗಳು ಮಲಗಿದ್ದ ಹಳ್ಳಿಯ ಹೊಲ ಗಳನ್ನು ಎಬ್ಬಿಸುವಂತೆ ಮತ್ತು ಚೀನದ ಹೊಸರೈತರ ಉದಯವನ್ನು ಪ್ರತಿ ಧ್ವನಿಸುವಂತಿದ್ದವು.

ಅಷ್ಟುಹೊತ್ತಿಗೆ ಬಾಣ ಬಿರುಸುಗಳು ಹತ್ತಿ, ಕರಾರುಪತ್ರಗಳೆಲ್ಲ ಒಂದಾದಮೇಲೊಂದರಂತೆ ಸುಟ್ಟುಬೂದಿಯಾದವು. ಅವು ಈ ಮುನ್ನ ರೈತರ ರಕ್ತ ಹೀರಲು ಜಮೀನ್ದಾರರಿಗೆ ಅತ್ಯಂತ ಸಹಕಾರಿಯಾದ ಆಯುಧ ಗಳಾಗಿದ್ದವು. ಈಗ ಅವೆಲ್ಲ ಎಳೆಎಳೆಯಾಗಿ ಬೂದಿಯಾಗಿ ಗಾಳಿಯಲ್ಲಿ ತೂರಿಹೋದವು.

# ಸಂತಸದ ಮೊದಲ ಸವಿ

ಹೊಸ ಜೀವನ ಆರಂಭಿಸಿದ ಪೆಂಗ್-ಚು ವಂಶಸ್ಥರ ವಠಾರದಲ್ಲಿ ಸುಮಧುರವಾದ ಹೃದಯದ ಮಿಡಿತದಂತೆ ಗಂಭೀರವಾದ ಶಬ್ದವೊಂದು ಕೇಳಿ ಬರುತ್ತಿತ್ತು. ಅದು ಸಿ-ವುವಿನ ಅವಳಿಮಕ್ಕಳ ಕೆಂದುಟಿಗಳನ್ನು ಮೀಟಿ ಬರುತ್ತಿತ್ತು. ತೊಟ್ಟಿಲನ್ನು ಕಾಲಿನಿಂದ ಒದೆಯುತ್ತ ಕೈಗಳನ್ನು ಎಸೆಯುತ್ತ ಆ ಮಕ್ಕಳು ಪ್ರಪಂಚಕ್ಕೆ ಒಂದು ಅಮೋಘ ಸಂದೇಶವನ್ನು ಸಾರುವಂತಿತ್ತು: "ಇನ್ನುಮುಂದೆ ನವಚೀನದಲ್ಲಿ ಜಮೀನ್ದಾರರ ಸುಲಿಗೆಗೆ ಅವಕಾಶವಿಲ್ಲ; ನವಚೀನವು ನಮ್ಮದು!"

ರೈತರು ಬಗೆಬಗೆಯ ತಿಂಡಿಗಳನ್ನು ತಂದು ತಾಯಿಗೆ ಕೊಡುತ್ತಿದ್ದರು. ಮಕ್ಕಳ ಆಟಪಾಟಗಳನ್ನು ನೋಡಿ ಸಂತೋಷದಿಂದ ಮರಳುತ್ತಿದ್ದರು. ಇಡೀ ಜನಾಂಗವೇ ಬಂಧಮುಕ್ತರಾದ ಈ ಸುಸಮಯದಲ್ಲಿ ಹುಟ್ಟಿದ ಆ ಮಕ್ಕಳು ನಿಜಕ್ಕೂ ಬಹು ಬುದ್ಧಿಶಾಲಿಗಳು! ಧನ್ಯರು! ಸಿ-ವುವಾದರೋ ಹಿಂದಿಗಿಂತಲೂ ಹೆಚ್ಚು ಚುರುಕಾಗಿ ಕೆಲಸಮಾಡತೊಡಗಿದನು. ಬೆಳಿಗ್ಗೆ ಹೊರಟವನು ಸಾಯಂಕಾಲ ಹೊತ್ತಾಗಿ ಮರಳಿ ಬರುತ್ತಿದ್ದ. ಅವನಿಗೆ ಈ ಅಪೂರ್ವ ಸಂತೋಷವು ದಿನಚರಿಯ ಕಾರ್ಯಕಲಾಪಗಳಿಗೆ ಅಡ್ಡಿಯಾಗಿ ಬರಲಿಲ್ಲ. ಬದಲು ಮತ್ತಷ್ಟು ಹುಮ್ಮಸ್ಸಿನಿಂದ ಕೆಲಸಮಾಡುವಂತೆ ಪ್ರೋತ್ಸಾಹಿಸಿತು.

ಜನರು ಸಂತೋಷದ ಇನ್ನೆರಡು ಘಟನೆಗಳನ್ನು ನಿರೀಕ್ಷಿಸುತ್ತಿದ್ದರು. ಚುನ್-ಸಿಂಗ್ ಮತ್ತು ಫು-ಚುವಾನ್‌ರ ಮಧ್ಯೆ ಪ್ರೇಮ ಬೆಳೆದಿದೆಯೆಂದು ಅವರಿಗೆ ತಿಳಿದಿತ್ತು. ಅದೇರೀತಿ ಯು-ಲಿಯನ್ ಮತ್ತು ಟಾ-ಮಿಂಗ್‌ರ ಮಧ್ಯೆ 'ಏನೋ ಇದೆ' ಎಂದೂ ಹಾಸ್ಯಮಾಡಿದ್ದರು. ಇವರ ಹಾಸ್ಯಕ್ಕೆ ತಕ್ಕಂತೆ ಕಳೆದ ಬಿಡುಗಡೆಯ ಮಹೋತ್ಸವದಲ್ಲಿ ಇಬ್ಬರೂ ಸುಗ್ಗಿ ಕುಣಿತದಲ್ಲಿಸುತ್ತಲೂ ಜನರಿರುವರೆಂಬ ಪರಿವೆಯೇ ಇಲ್ಲದೆ, ಬಹಳ ಹೊತ್ತು ಹಿಗ್ಗಿ ಹಿಗ್ಗಿ ಕುಣಿದಿದ್ದರು. ಈ ನಾಲ್ವರ ಪ್ರೇಮಬಾಂಧವ್ಯ ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು. ಅವರ ವಿವಾಹ ಅದಷು ಜಾಗ್ರತೆ

ಆಗಬೇಕೆಂದ. ಸಿ-ವು ನಗೆಯ ಮಧ್ಯೆ ಹೇಳಿಯೇಬಿಟ್ಟ. ಲೀ-ಅಜ್ಜಿಗೂ ತನ್ನ ಮಗಳು ಪ್ರಾಮಾಣಿಕನೂ ಕಷ್ಟಪಟ್ಟು ಕೆಲಸಮಾಡುವವನೂ ಆದ ಫು-ಚುವಾನನನ್ನು ಮದುವೆಯಾಗುವುದು ಅತ್ಯಾನಂದಕರವಾದ ವಿಷಯ ವಾಗಿತ್ತು.

ಬಿಡುಗಡೆಯ ಮಹೋತ್ಸವದ ದಿನ ಸಂಜೆ 'ಅಭಿಪ್ರಾಯವಿನಿಮಯ ಕ್ಕಾಗಿ' ವಿವಿಧ ರೈತದಳದ ಕಾರ್ಯಕರ್ತರುಗಳು ಒಂದುಕಡೆ ಸೇರಿದರು. ತಾವು ನಡೆಸಿದ ಕಾರ್ಯಗಳನ್ನೆಲ್ಲಾ ಕೂಲಂಕುಶವಾಗಿ ವಿಮರ್ಶಿಸಿ ಎಲ್ಲಾ ದರೂ ತಪ್ಪುಮಾಡಿದ್ದಲ್ಲಿ ತೋರಿಸಿಕೊಡಬೇಕೆಂದುರೈತರನ್ನು ಕೇಳಿಕೊಂಡರು. ಹಳ್ಳಿಹಳ್ಳಿಗೂ ಹೋಗಿ ಸಣ್ಣ ಸಭೆ ಸೇರಿಸಿ ಭೂಸುಧಾರಣೆಯ ನಿಯಮ ಗಳನ್ನು ಮತ್ತೊಮ್ಮೆ ಒತ್ತಿಹೇಳಿ ತಾವು ಗಳಿಸಿದ ಜಯವನ್ನು ಭದ್ರಪಡಿಸಲು ಎಲ್ಲ ಕಾರ್ಯಕ್ರಮಗಳನ್ನೂ ಕೈಕೊಂಡರು. ಈ ಚಳವಳಿಯಲ್ಲೇ ರೈತರ ಗುಂಪಿನಿಂದ ಸಿ-ವು ಸಂತಹ ದಕ್ಷರಾದ ನಾಯಕರುಗಳು ಹುಟ್ಟಿದುದು.

೨೬ನೇ ಜನವರಿ ತಿಂಗಳ ಪ್ರಾತಃಕಾಲ ಭೂಸುಧಾರಣಾದಳದ ಲು-ಯಾಂಗ್‌ನನ್ನು ಬೀಳ್ಕೊಡಲು ರೈತರೆಲ್ಲ ನೆರೆದರು. ಮೆರವಣಿಗೆಯಲ್ಲಿ ಆತನನ್ನು ವರ್ಜನದಿಂಪವರೆಗೂ ಕರೆದೊಯ್ದರು. ಟೆಲಿಫೋನ್ ತಂತಿಗಳ ಕೆಳಗೆ ಮೆರವಣಿಗೆ ವಿಜೃಂಭಣೆಯಿಂದ ನಾಗಿತು. ಷುವಾಂಗ್-ಚುವಾನನು ದೋಣಿಯನ್ನು ಮಾಟಿದನು. ಆಚೆದಡ ಸೇರುವ ಮುನ್ನ, ಲು-ಯಾಂಗ್‌ನು ಏರಿಯ ಕಡೆ ತೋರಿಸುತ್ತಾ ದಡದಲ್ಲಿದ್ದ ರೈತರನ್ನುದ್ದೇಶಿಸಿ, " ಏರಿಯನ್ನು ಸರಿಮಾಡಿ. ಹೆಚ್ಚು ಶ್ರಮವಹಿಸಿ ಕೆಲಸಮಾಡಿ. ಈ ವರ್ಷದ ಫಸಲು ನಿಮ್ಮದೇ ಎಂಬುದನ್ನು ಮರೆಯಬೇಡಿ" ಎಂದು ಕೂಗಿ ಹೇಳಿದನು. ರೈತ ರೆಲ್ಲ ತಮ್ಮ ಸಮ್ಮತಿ ಸೂಚಿಸಿದರು. ಷು-ಮಿನ್ ಗಟ್ಟಿಯಾಗಿ "ಕಾಮ್ರೇಡ್ ಲೂ, ಮುಂದಿನ ಮಳೆಗಾಲದ ಹಬ್ಬಕ್ಕೆ ಬನ್ನಿ. ಹೊಸ ಅಕ್ಕಿಯ ಅನ್ನದ ರುಚಿಯನ್ನು ನೋಡುವಿರಂತೆ" ಎಂದು ಕೂಗಿದಳು. ರೈತರು ಕಾಲೆಳೆದು ಕೊಂಡು ತಮ್ಮ ಮನೆಗಳಿಗೆ ಹಿಂದಿರುಗಿದರು.

ಅದೇ ಸಾಯಂಕಾಲ ಸಿ-ವು ರೈತಬಳಗದ ಕಾರ್ಯಕರ್ತರ ಸಭೆ ಸೇರಿಸಿದ. ಅದರಲ್ಲಿ ನದಿಯ ಪ್ರವಾಹದಿಂದಾಗುವ ಅನಾಹುತಗಳನ್ನು

ಚರ್ಚಿಸಿದರು. ಅಣೆಕಟ್ಟನ್ನು ಸರಿಪಡಿಸಿ ಏರಿಗಳನ್ನು ವಸಂತಋತು ಬರುವುದಕ್ಕೆ ಮೊದಲೇ ಕಟ್ಟಬೇಕೆಂದು ತೀರ್ಮಾನಿಸಿದರು. ಇದಕ್ಕಾಗಿ ೩ ಉಪಸಮಿತಿಗಳನ್ನು ನೇಮಿಸಿದರು. ಶೇ. ೭೦ರಷ್ಟು ಖರ್ಚನ್ನು ತಾವೇ ಹಾಕಬೇಕೆಂದೂ ಶೇ. ೩೦ನ್ನು ಸರ್ಕಾರದಿಂದ ಸಾಲದ ರೂಪದಲ್ಲಿ ಪಡೆಯಬೇಕೆಂದೂ ನಿರ್ಧರಿಸಿದರು.

ಈ ಮೊದಲೇ ಪ್ರಾಂತೀಯ ಸರ್ಕಾರವು ಈ ಕೆಲಸವನ್ನು ಮಾಡಬೇಕೆಂದು ಯೋಜನೆಯೊಂದನ್ನು ತಯಾರಿಸಿತ್ತು. ಅದರ ಪ್ರಕಾರ ಏರಿಯ ಅಗಲವನ್ನು ನಾಲ್ಕೂವರೆ ಅಡಿಗಳಿಂದ ೨೦ ಅಡಿಗಳವರೆಗೂ ಎತ್ತರವನ್ನು ಹತ್ತು ಅಡಿಗಳಿಂದ ೩೩·೮ ಅಡಿಗಳವರೆಗೂ ಹೆಚ್ಚುಮಾಡಬೇಕೆಂದಿದ್ದಿತು. ರೈತರೇ ಮುಂದೆ ಬಂದು ಈ ಕೆಲಸ ಕೈಕೊಂಡದ್ದರಿಂದ ಈ ಯೋಜನೆ ಕಾರ್ಯಗತವಾಗುವುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಹಳ್ಳಿಯಲ್ಲಿ ನಾನಾಅಳತೆಗಳ ಒಟ್ಟು ೩೩ ಅಣೆಕಟ್ಟುಗಳಿದ್ದವು. ಅವುಗಳಲ್ಲಿ ಬಹುಭಾಗ ಜರಡಿಯಂತೆ ಸೋರುತ್ತಿದ್ದವು. ಕೆಲವು ಪ್ರವಾಹದ ಹಾವಳಿಗೆ ತುತ್ತಾಗಿ ಮುರಿದುಬಿದ್ದಿದ್ದವು. ಆದ್ದರಿಂದ ಹೊಸ ಜಲಾಶಯವನ್ನು ಕಟ್ಟುವ ಬದಲು ಇರುವುದನ್ನೇ—ಅವುಗಳಲ್ಲೂ ಹೆಚ್ಚು ಲಾಭದಾಯಕವಾದವುಗಳನ್ನು—ಜಾಗ್ರತೆ ದುರಸ್ತುಮಾಡಬೇಕೆಂದು ತೀರ್ಮಾನಿಸಿದರು.

ಮರುದಿನ ಮುಂಜಾನೆ ೩೯-ಲು ಹಳ್ಳಿಯ ರೈತರೆಲ್ಲರೂ ಏರಿಯಕಡೆಗೆ ಗುದ್ದಲಿ-ಪಿಕಾಶಿ ಮತ್ತು ಮಕ್ಕರಿಗಳನ್ನು ಹೊತ್ತುಕೊಂಡು ಹರಟೆಕೊಚ್ಚುತ್ತ ಕೇಕೆಹಾಕುತ್ತಾ, ಪದ ಹಾಡುತ್ತಾ ಅದೇತಾನೇ ಉದಯಿಸಿದ್ದ ಚಳಿಗಾಲದ ಬೆಚ್ಚಗಿದ್ದ ಸೂರ್ಯನಂತೆ ಗೆಲುವಿನಿಂದ ಹೊರಟರು. ''ಲೀ-ಅಜ್ಜಿ, ಈ ಇಳಿವಯಸ್ಸಿನಲ್ಲಿ ನೀನೇಕೆ ಕಷ್ಟಪಡುತ್ತೀಯೆ. ನೀನು ಮನೆಯಲ್ಲೇ ಇರು, ನಿನ್ನ ಮಗಳೊಬ್ಬಳು ಕೆಲಸ ಮಾಡಿದರೆ ಸಾಕು'' ಎಂದು ಒಬ್ಬ ಹೇಳಿದ. ಲೀ-ಅಜ್ಜಿಯು ಊಟದ ಬುಟ್ಟಿಯನ್ನು ಒಂದು ಭುಜದಮೇಲೆ ನೇತುಹಾಕಿ ಇನ್ನೊಂದು ತೋಳನ್ನು ತಿರುವುತ್ತಾ, "ನನ್ನಮಗಳಿಗೂ ಜಮೀನು ಬಂದಿದೆ, ನನಗೂ ಸಿಕ್ಕಿದೆ. ನನ್ನ ಬದಲಿಗೆ ಅವಳು ಹೇಗೆ ಬಂದಾಳು? ನನ್ನ ೫೦ ವರ್ಷಗಳ ಜೀವಮಾನದಲ್ಲಿ ಏರಿಯನ್ನು ದುರಸ್ತುಮಾಡಲು ಇದೇ ಮೊದಲು

ಹೋಗುತ್ತಿರುವುದು-ಅದೂ ನನ್ನ ಪ್ರಯೋಜನಕ್ಕಾಗಿಯೇ ಹೀಗಿರುವಲ್ಲಿ, ಮನೆಯಲ್ಲಿ ಒಬ್ಬಳೇ ಉಳಿಯುವುದಕ್ಕೆ ಹೇಗೆ ಮನಸ್ಸು ಬರುತ್ತೆ ?" ಎಂದು ನಕ್ಕಳು.

ಏರಿಯನ್ನು ತಲುಪಿದೊಡನೇ ಸೆ-ವು ಎಲ್ಲರನ್ನೂ ಬೇರೆಬೇರೆ ಗುಂಪುಗಳಾಗಿ ವಿಂಗಡಿಸಿ ಒಂದೊಂದು ಗುಂಪಿಗೂ ಪ್ರತ್ಯೇಕ ಕೆಲಸವನ್ನು ಗೊತ್ತುಮಾಡಿ ಕಾರ್ಯವು ಕ್ರಮಬದ್ಧವಾಗಿ ಸುಸೂತ್ರವಾಗಿ ಸಾಗಲು ತಕ್ಕ ವ್ಯವಸ್ಥೆ ಮಾಡಿದನು. ಸುತ್ತಲೂ ಮೈಕೊರೆಯುವ ಚಳಿ ಇದ್ದರೂ, ಎಲ್ಲರೂ ಬೆವರು ಸುರಿಸುವಂತೆ ದುಡಿದರು. ಹೊತ್ತು ಮುಳುಗುವವರೆಗೂ ಕೆಲಸ ಸಾಗಿತು. ಏರಿಯು ಎತ್ತರವಾದುದನ್ನು ಎಲ್ಲರೂ ಕತ್ತೆತ್ತಿ ಎಷ್ಟುಬಾರಿ ನೋಡಿದರೂ ಅವರ ಮನಸ್ಸು ತಣಿಯಲಿಲ್ಲ. ಕುವಾಂಗ್-ಲಿನು ಏರಿಯ ಕಡೆಯೇ ದಿಟ್ಟಿಸಿ ನೋಡುತ್ತಾ "ಜಮೀನ್ದಾರ ರಾಕ್ಷಸರನ್ನು ನಿರ್ನಾಮ ಮಾಡಿದ ಮೇಲೆ ಈ ಪ್ರವಾಹ ರಾಕ್ಷಸಿಯನ್ನು ಹಿಡಿದು ನಿಲ್ಲಿಸುವುದರಲ್ಲಿ ಏನು ಕಷ್ಟವಿದೆ" ಎಂದನು. ಆಗಾಗ್ಗೆ ಹಿಂದಿರುಗಿ ಎತ್ತರಿಸಿದ ಏರಿಯನ್ನು ಹೆಮ್ಮೆಯಿಂದ ನೋಡುತ್ತಾ ರೈತರು ತಮ್ಮ ಮನೆಗಳಿಗೆ ತೆರಳಿದರು.

* * * *

ಆ ದಿನ ಸಾಯಂಕಾಲ ರಾತ್ರಿಶಾಲೆಯಲ್ಲಿ ಎಂದಿಗಿಂತಲೂ ಹೆಚ್ಚು ಜನರು ಸೇರಿದ್ದರು. ಓದುಬರಹ ಕಲಿಯಲು ಅವರಲ್ಲಿದ್ದ ಆಸಕ್ತಿಯನ್ನು ಕಂಡ ಯಾವನಾದರೂ, ರೈತರ ಸಾಂಸ್ಕೃತಿಕ ಅಧೋಗತಿ ಮುಗಿದು, ಅವರೂ ಎಲ್ಲರಂತೆ ಉನ್ನತಮಟ್ಟಕ್ಕೆ ಏರುವರು ಎಂಬುದರಲ್ಲಿ ಎಳ್ಳಷ್ಟು ಸಂಶಯವನ್ನೂ ವ್ಯಕ್ತಪಡಿಸುವ ಹಾಗಿರಲಿಲ್ಲ. ಕೆಲವರು ಅಂಗಡಿಯಲ್ಲಿ ಪಠ್ಯಪುಸ್ತಕಗಳೆಲ್ಲ ಮುಗಿದುಹೋಗಿವೆಯೆಂದು ದೂರು ಹೇಳಿದರು. ಉಪಾಧ್ಯಾಯ ಕೋ-ಚಾಂಗ್ ಅವರನ್ನು ಸಮಾಧಾನಪಡಿಸಿ, 'ನೀವೆಲ್ಲ ಇಡೀದಿನ ಬೆವರು ಸುರಿಸಿ ದುಡಿದಿದ್ದೀರಿ. ಆದರೆ ಓದು ಕಲಿಯುವುದರಲ್ಲಿ ನಿಮಗೆ ಇಷ್ಟೊಂದು ಆಸಕ್ತಿ ಏಕೆ ?' ಎಂದು ಕೇಳಿದನು. ಒಬ್ಬೊಬ್ಬರೂ ತಮ್ಮ ಅಜ್ಞಾನವನ್ನು ಹೇಗೆ ಜಮೀನ್ದಾರರು ಅವರ ಲಾಭಕ್ಕೆ ಉಪಯೋಗಿಸಿಕೊಂಡರೆಂಬುದನ್ನು ವಿವರಿಸಿದರು. "ನಮಗೆ ಅಕ್ಷರ ಬರದಿದ್ದರೆ, ವೃತ್ತಪತ್ರಿಕೆಗಳನ್ನು ಹೇಗೆ

ಓದುವುದು ; ಮತ್ತು ನಿಜ ಯಾವುದು, ಸುಳ್ಳು ಯಾವುದು ಎಂದು ಹೇಗೆ ತಿಳಿದುಕೊಳ್ಳುವುದು ?" ಎಂದು ಫು-ಚುವಾನ್ ಹೇಳಿದ.

ಅಂತೂ ರೈತರಲ್ಲಿದ್ದ ಅಕ್ಷರಾಭ್ಯಾಸದ ಆಕಾಂಕ್ಷೆಯಬಗ್ಗೆ ಸಾಕಷ್ಟು ನಿದರ್ಶನ ದೊರೆಯಿತು ಆದರೆ, ಉಪಾಧ್ಯಾಯರ ಅಭಾವ ಮತ್ತು ಶಾಲೆಗಳ ಕಡಿಮೆ ಸಂಖ್ಯೆ ಸಮಸ್ಯೆಯಾಗಿಯೇ ಉಳಿದಿತ್ತು. ೭೦೦-೮೦೦ ಮಂದಿ ಇರುವ ಆ ದೊಡ್ಡ ಹಳ್ಳಿಯಲ್ಲಿ ಕೇವಲ ಎರಡೇ ಶಾಲೆಗಳಿದ್ದವು. ಕೊನೆಗೆ, ಎಲ್ಲರೂ ತಮಗೆ ಕೈಲಾದಷ್ಟು ಭೂಮಿ-ಕಾಣಿಗಳನ್ನು ಶಾಲೆಗಳಿಗೋಸ್ಕರ ಕಾಣಿಕೆ ಕೊಡಬೇಕೆಂದು ತೀರ್ಮಾನಿಸಲಾಯಿತು. ಹಿಂದೆ, ಶಾಲೆಯ ಉಪಯೋಗಕ್ಕೆಂದು ಸ್ವಲ್ಪ ಸಾರ್ವಜನಿಕ ಭೂಮಿ ಮೀಸಲಾಗಿಟ್ಟದ್ದಿತು. ಜಮೀನ್ದಾರರು ಅದನ್ನು ತಮ್ಮ ಸ್ವಂತ ಜಮೀನಿಗೆ ಸೇರಿಸಿಕೊಂಡದ್ದಲ್ಲದೆ, ಯಾವ ಹೊಸ ಶಾಲೆಗಳನ್ನೂ ತೆರೆದಿರಲಿಲ್ಲ. ಈಗ ಆ ಭೂಮಿ ರೈತಬಳಗದವರ ವಶದಲ್ಲಿರುವುದನ್ನು ಮಹಿಳಾಸಂಘದ ಮುಖ್ಯಸ್ಥೆ ಷು-ಮಿನ್ ಸೂಚಿಸಿ ಅದನ್ನು ಹೊಸ ಶಾಲೆಗಳ ನಿರ್ಮಾಣಕ್ಕೆ ಉಪಯೋಗಿಸಬೇಕೆಂದು ಸಲಹೆಯಿತ್ತಳು. ಎಲ್ಲರೂ ಅವಳ ಸಲಹೆಯನ್ನು ಮೆಚ್ಚಿದರು. ರೈತದಳದವರು ಜಮೀನ್ದಾರರಿಂದ ಕಸಿದುಕೊಂಡಿದ್ದ ಕಟ್ಟಡದ ಸಾಮಾನು-ಸರಂಜಾಮುಗಳನ್ನು ವಾಪಸು ಪಡೆದು, ಬಡಗಿಗಳ ಸಹಾಯದಿಂದ ಒಂದು ದೊಡ್ಡ ಕಟ್ಟಡವನ್ನು ಶಾಲೆಗಾಗಿ ನಿರ್ಮಿಸಬೇಕೆಂದು ನಿರ್ಧರಿಸಿದರು. ಬಹಳ ದಿನಗಳಿಂದ ಆ ಹಳ್ಳಿಯ ರೈತರು ಕಾಣುತ್ತಿದ್ದ ಕನಸು ಇಂದು ನನಸಾಗುವುದರಲ್ಲಿತ್ತು.

* * * *

ಫು-ಚುವಾನ್ ಮತ್ತು ಚುನ್-ಸಿಂಗಳಿಗೂ, ಟಾ-ಮಿಂಗ್ ಮತ್ತು ಯು-ಲಿಯನ್‌ಳಿಗೂ ವಿವಾಹವನ್ನೆಸಗಬೇಕೆಂದು ಜನದಳದ ಸಭೆಯಲ್ಲಿ ತೀರ್ಮಾನವಾಯಿತು. ಈ ನಾಲ್ವರು ದಂಪತಿಗಳಾಗುವುದು ಸೀ-ಲು ಹಳ್ಳಿಯ ರೈತರ ಬಿಡುಗಡೆಯ ಹೆಗ್ಗುರುತು ಎಂದು ಎಲ್ಲರೂ ಹೆಮ್ಮೆಪಡುತ್ತಿದ್ದರು. ಏಕೆಂದರೆ, ಇವರು ನಾಲ್ವರೂ ಜಮೀನ್ದಾರರ ತುಳಿತಕ್ಕೆ ಸಿಕ್ಕಿ ಹೆಚ್ಚಾಗಿ ನೊಂದಿದ್ದವರು. ಮುಹೂರ್ತವು ಫೆಬ್ರವರಿ ೪ ನೆಯ ತಾರೀಖಿಗೆ ನಿಷ್ಕರ್ಷಿಸಲ್ಪಟ್ಟಿತು. ಈ ನಾಲ್ವರು ಮಾತಿಗೆ ಮೀರಿದ

ಆನಂದದಲ್ಲಿ ತೇಲಿದರು. ತಮ್ಮ ಸುಖಸಂತೋಷಗಳಿಗೆ ರಾಷ್ಟ್ರಾಧ್ಯಕ್ಷ ಮಾವೋರವರು ಮತ್ತು ಕಮ್ಯೂನಿಸ್ಟ್ ಪಕ್ಷವೇ ಮೂಲಕಾರಣರೆಂದು ಕೃತಜ್ಞತೆಯಿಂದ ಜ್ಞಾಪಿಸಿಕೊಂಡರು. ಇವಕ್ಕೋಸ್ಕರ ಧರ್ಮಾತ್ಮರಾದ ಅಧ್ಯಕ್ಷ ಮಾವೋರವರಿಗೆ ತಮ್ಮ ಕೃತಜ್ಞತೆಗಳನ್ನರ್ಪಿಸಿ ಮತ್ತು ದೇಶದ ಹಿತಕ್ಕಾಗಿ ತಾವೇ ಯೋಚಿಸಿರುವ ತಮ್ಮದೇ ಆದ ಒಂದು ಯೋಜನೆಯನ್ನು ನಿರೂಪಿಸಿ ಒಂದು ಕಾಗದ ಬರೆಯಬೇಕೆಂದು ತೀರ್ಮಾನಮಾಡಿಕೊಂಡರು.

ಹಂಚಿಕೆಯ ಸಮಿತಿಯು, ವೆಂಗ್-ಎರುವಿನ ವಾಸಗೃಹವನ್ನು ಫು-ಚುವಾನ್‌ಗೆ ಕೊಟ್ಟಿದ್ದಿತು. ಈಗ ಅಲ್ಲಿಗೆ ಚುನ್-ಸಿಂಗಳೂ ಲೀ ಅಜ್ಜಿಯೂ ಹೋಗಿ ಸೇರಿದರು. ಚುನ್-ಸಿಂಗ್ ಮತ್ತು ಫು-ಚುವಾನ್ ತಮ್ಮ ದಾಂಪತ್ಯ ಜೀವನದ ಪ್ರಥಮದಿನವನ್ನು ವೈಭವದಿಂದ ಆಚರಿಸಬೇಕೆಂದು ಮುಂಚೆಯೇ ಸಾಮಾನುಗಳನ್ನು ಕೊಳ್ಳಲೋಸುಗ ಪೇಟೆಯ ಬೀದಿಗೆ ಹೊರಟರು. ಅಂಗಡಿ ನಾಲು ಹೊಸ ಕಳೆಯಿಂದ ಕಂಗೊಳಿಸುತ್ತಿತ್ತು. ಹಿಂದೆ ಎಲ್ಲಿ ನೋಡಿದರೂ ರೈತರು ಮಾರುವ ಕಾರ್ಯದಲ್ಲಿ ಮಾತ್ರ ತೊಡಗಿದ್ದರು. ಈಗಾದರೋ ಅವರು ಸಾಮಾನುಗಳನ್ನು ಕೊಂಡು ದೊಡ್ಡ ಬುಟ್ಟಿಗಳಲ್ಲಿ ತುಂಬಿಕೊಂಡು ಓಡಾಡುತ್ತಿದ್ದರು. ಹಿಂದೆ 'ವಸಂತ ಭವನ' ಹೋಟಲು ಐಶ್ವರ್ಯವಂತರಿಗೆ ಮಾತ್ರ ಮೀಸಲಾಗಿತ್ತು. ಈಗ ಬಡರೈತರೂ ಹೋಗಬಹುದಿತ್ತು. ಅಂಗಡಿಗಳಲ್ಲೆಲ್ಲಾ ಸಾಮಾನುಗಳು ಒತ್ತಾಗಿ ತುಂಬಿದ್ದು, ಸಮೃದ್ಧಿಯನ್ನು ಸೂಚಿಸುತ್ತಿದ್ದವು. ಇಬ್ಬರೂ ಜವಳಿ ಅಂಗಡಿಗೆ ಹೋದರು. ಅಲ್ಲಿಯೂ ಜನಜಂಗುಳಿ ವಿಪರೀತವಾಗಿತ್ತು. ಪಕ್ಕದ ಹಳ್ಳಿಗಳಿಂದ ರೈತರು ಜವಳಿ ವ್ಯಾಪಾರಮಾಡಲು ಅಧಿಕಸಂಖ್ಯೆಯಲ್ಲಿ ಬಂದಿದ್ದರು. ಜನರ ಸಂಭ್ರಮ, ಉತ್ಸಾಹವನ್ನು ನೋಡಿ " ಇದೇನು, ಎಲ್ಲರೂ ಮದುವೆಯಾಗ ಹೊರಟಿದ್ದಾರೆಯೇ ?" ಎಂದು ಚುನ್-ಸಿಂಗ್ ಆಶ್ಚರ್ಯಪಟ್ಟಳು.

ಆ ಬೀದಿಯ ಕೊನೆಯಲ್ಲಿ ಒಂದು ಹೊಸ ಅಂಗಡಿ ತೆರೆದಿದ್ದಿತು. ಬಾಗಿಲ ಬಳಿ " ಹ್ಯೂಸಾನ್ ಕಂಪೆನಿ " ಎಂದು ಒಂದು ಹಲಗೆಯಮೇಲೆ ಬರಹವಿದ್ದಿತ್ತು. ಆ ಅಂಗಡಿಯನ್ನು ಸರ್ಕಾರದವರು ಇಟ್ಟಿದ್ದಾರೆಂದು ತಿಳಿದುಬಂದಿತು. ಹಿಂದೆ ರೈತರು ತಮ್ಮ ವಸ್ತುಗಳನ್ನು ಅತ್ಯಂತ ಕಡಿಮೆ

ಬೆಲೆಗೆ ಮಾರಿ, ಇತರೆ ಅವಶ್ಯ ಸಾಮಾನುಗಳನ್ನು ವಿಪರೀತ ದುಬಾರಿ ಬೆಲೆಗೆ ಕೊಳ್ಳಬೇಕಾಗಿತ್ತು. ಆದರೆ ಈಗ, ಈ ಹೊಸ ಅಂಗಡಿಯಲ್ಲಿ, ರೈತರು ಮಾರುವ ವಸ್ತುಗಳನ್ನು ಬೇರೆ ಕಡೆಗಳಿಗಿಂತ ಸುಮಾರು ಶೇ. ೩೦ ಅಥವಾ ಶೇ. ೪೦ ಹೆಚ್ಚಾದ ಬೆಲೆಗೆ ಕೊಳ್ಳುತ್ತಿದ್ದರು. ಮಾರುವ ಬೆಲೆಯೂ ಬಹಳ ಕಡಿಮೆಯಾಗಿತ್ತು. ಇಲ್ಲಿ ರೈತರಿಗೆ ತುಂಬ ಸಹಕಾರಿಯಾದ ಸಲಕರಣೆಗಳು, ರಾಸಾಯನಿಕ ಗೊಬ್ಬರಗಳು, ಹೊಸ ವಿಧಾನದ ಉಳುವ ಯಂತ್ರಗಳು ಮೊದಲಾದುವೆಲ್ಲ ಕಮ್ಮಿ ಬೆಲೆಗೆ ದೊರೆಯುತ್ತಿದ್ದುವು. ಅಷ್ಟೇ ಅಲ್ಲದೆ ಈಗ ಹಿಂದಿನಂತೆ ದಳ್ಳಾಳಿಗಳ ತೊಂದರೆಯಿರಲಿಲ್ಲ. ಅಲ್ಲಿಂದ ಅವರಿಬ್ಬರೂ ಪಕ್ಕದಲ್ಲೇ ಇದ್ದ ಪುಸ್ತಕದ ಅಂಗಡಿಗೆ ಹೋಗಿ, ಪ್ರಾಥಮಿಕ ಪಠ್ಯ ಪುಸ್ತಕವನ್ನು, ಸೀಸದಕಡ್ಡಿ, ರಬ್ಬರ್ ಮೊದಲಾದವನ್ನೂ ತೆಗೆದುಕೊಂಡರು. ಕೊನೆಯಲ್ಲಿ ಅವರು ಅಂದು ಕೊಂಡ ವಸ್ತುಗಳಿಗೆ ಕಳಶಪ್ರಾಯವಾಗಿರುವಂತೆ ಸುಂದರವಾದ ರಾಷ್ಟ್ರಾಧ್ಯಕ್ಷ ಮಾವೋರವರ ಚಿತ್ರವೊಂದನ್ನು ಕೊಂಡರು.

ಇದರಂತೆಯೇ ಟಾ-ಮಿಂಗ್ ಮತ್ತು ಯು-ಲಿಯನ್‌ರು ಸಿಚ್ಚಿಯೋ ಹಳ್ಳಿಯ "ಸಹಕಾರ ಸಂಘ"ದ ಅಂಗಡಿಗೆ ಹೋಗಿ ತಮಗೆ ಬೇಕಾದ ಸಾಮಾನುಗಳನ್ನು ಕೊಂಡರು. ಆ ಸಹಕಾರಸಂಘದ ನಿಯಮ-ಉದ್ದೇಶಗಳನ್ನೊಳಗೊಂಡ ಕೈಪಿಡಿಯೊಂದನ್ನೂ ಕೊಂಡರು. ಅಲ್ಲಿನ ಸಂಘಕ್ಕೆ ಆಗಲೇ ೨ ಸಾವಿರಕ್ಕೂ ಹೆಚ್ಚಾಗಿ ಬಡ ಮತ್ತು ಮಧ್ಯಮರೈತರು ಸದಸ್ಯರಾಗಿದ್ದರಂತೆ! ಅಲ್ಲಿ ಸಾಬೂನು, ಎಣ್ಣೆ, ಬಟ್ಟೆ, ಉಪ್ಪು ಇವುಗಳ ಬೆಲೆಯನ್ನು ಕೇಳಿ ಸಿಚಿಲು ಹಳ್ಳಿಯ ರೈತರಿಗೆ ಆಶ್ಚರ್ಯವಾಯಿತು. ತಮ್ಮ ಹಳ್ಳಿಯಲ್ಲೂ ಅಂತಹ ಸಹಕಾರಸಂಘ ಸ್ಥಾಪಿಸಬೇಕೆಂದು ಅಂದುಕೊಂಡರು.

* * * *

ರೈತಬಳಗದವರು ಕಾಲಕಾಲಕ್ಕೆ ರೈತರಿಗೆ ಅವರ ಉಳುಮೆಯ ಕೆಲಸದಲ್ಲಿ ಸೂಕ್ತ ಸಲಹೆಗಳನ್ನೀಯುತ್ತಿದ್ದರು. ಹೆಚ್ಚು ಶ್ರಮವಹಿಸಿ ದುಡಿದು ಉತ್ಪಾದನೆಯನ್ನು ಹೆಚ್ಚಿಸುವಂತೆ ಉತ್ತೇಜಿಸುತ್ತಿದ್ದರು. 'ಉತ್ಪಾದನಾ ಸಮಿತಿ'ಯೂ ರೈತರನ್ನೆಲ್ಲಾ ಗುಂಪುಗುಂಪಾಗಿ ವಿಂಗಡಿಸಿ ಸಂಘಟಿತ

ಸಾಮೂಹಿಕ ಕಾರ್ಯದಲ್ಲಿ ತೊಡಗಿತು. ಉಪಕರಣಗಳನ್ನೂ ಒಟ್ಟಾಗಿ ಕೊಂಡು ಎಲ್ಲರಿಗೂ ದೊರಕುವಂತೆ ಏರ್ಪಾಟು ಮಾಡಲಾಗಿತ್ತು. ಕಪ್ಪು ಹಲಗೆಯ ಮೇಲೆ ಗುರ್ತಿಸುತ್ತಿದ್ದ ಅಂಕೆ-ಸಂಖ್ಯೆಗಳು ಪ್ರತಿ ಸಂಸಾರವೂ ಉತ್ಪಾದನೆಯಲ್ಲಿ ಎಷ್ಟು ಮುಂದುವರೆದಿದೆ ಎಂಬುದನ್ನು ತಿಳಿಸುತ್ತಿದ್ದವು. ಬಲಶಾಲಿಗಳಾದ ಯುವಕರು ಕೆರೆಯ ಏರಿಯನ್ನು ಸರಿ ಪಡಿಸಿ, ತಮ್ಮ ಪಾಲಿನ ಹೊಲವನ್ನು ಉತ್ತು ಬಿತ್ತಿದ್ದೇ ಅಲ್ಲದೆ, ಸಮಯ ದೊರೆತಾಗಲೆಲ್ಲ ದೂರದ ಬೆಟ್ಟಪ್ರದೇಶಕ್ಕೆ ಹೋಗಿ ಅಲ್ಲಿ ಬಂಜರು ಬಿದ್ದಿದ್ದ ಭೂಮಿಯನ್ನೂ ವ್ಯವಸಾಯಕ್ಕೆ ಅನುಕೂಲವಾಗುವಂತೆ ಮಾಡುತ್ತಿದ್ದರು. ವಯಸ್ಸಾದ ಮುದುಕರು ಕಳೆ ಕೀಳುವುದು, ಎಲೆಗಳನ್ನು ಗುಡಿಸುವುದು, ಗೊಬ್ಬರ ಕೂಡಿಹಾಕುವುದು ಮೊದಲಾದ ಕೆಲಸಗಳಲ್ಲಿ ತೊಡಗಿದರು. ಮುದುಕಿಯರು ನೂಲು ನೇಯುವುದು, ಹಂದಿ ಮತ್ತು ಕೋಳಿಗಳನ್ನು ನೋಡಿಕೊಳ್ಳುವ ಕೆಲಸ ಮಾಡುತ್ತಿದ್ದರು.

ಹಳ್ಳಿಯ ಒಂದೊಂದು ರೈತಸಂಸಾರಕ್ಕೂ ಒಂದೊಂದು ವಿಧದ ಯೋಜನೆ ಹೊಳೆಯುತ್ತಿತ್ತು. ಎಲ್ಲರೂ ತಮ್ಮ ಸಲಹೆಗಳನ್ನು ಲಿಖಿತ ಮೂಲಕ ರಾಷ್ಟ್ರಾಧ್ಯಕ್ಷ ಮಾವೋರವರಿಗೆ ತಿಳಿಸಬೇಕೆಂದು ಇಚ್ಛಿಸುತ್ತಿದ್ದರು. ಉಪಾಧ್ಯಾಯ ಕೋ-ಚಾಂಗ್‌ನು "ದೇಶದಲ್ಲಿ ನಮ್ಮ ಹಳ್ಳಿಯಂತೆಯೇ ಸಾವಿರಾರು ಹಳ್ಳಿಗಳಿವೆ. ಎಲ್ಲರೂ ಮಾವೋರವರಿಗೆ ಕಾಗದ ಬರೆಯ ತೊಡಗಿದರೆ, ಎಲ್ಲವನ್ನೂ ಓದಲು ಅವರಿಗೆ ಹೇಗೆ ಸಾಧ್ಯವಾಗುತ್ತೆ? ನಿಮ್ಮೆಲ್ಲರ ಅಭಿಪ್ರಾಯಗಳನ್ನೂ ಸಂಗ್ರಹಿಸಿ ಒಂದು ಕಾಗದದಲ್ಲಿ ಬರೆದು ಕಳುಹಿಸೋಣ" ಎಂದನು.

ಶಾಲೆಯ ರಾತ್ರಿತರಗತಿ ಪತ್ರಲೇಖನಕ್ಕಾಗಿ ಮೀಸಲಾಯಿತು. ಒಬ್ಬೊಬ್ಬನೂ ಮುಂದೆ ಬಂದು ತನ್ನ ಸಂಸಾರದ ಅಭೀಷ್ಟವನ್ನೂ, ಭೂಸುಧಾರಣೆಯಿಂದ ತನಗಾದ ಅನುಕೂಲವನ್ನೂ ಹೇಳಿದ. ಉಪಾಧ್ಯಾಯ ಚಾಂಗ್ ಎಲ್ಲವನ್ನೂ ಒಂದು ಪುಸ್ತಕದಲ್ಲಿ ಗುರ್ತಿಸಿಕೊಂಡ. "ಭೂಸುಧಾರಣೆಯಾಗದೆ ಇದ್ದಿದ್ದರೆ ನನಗೆ ಮದುವೆಯೇ ಆಗುವಹಾಗಿರಲಿಲ್ಲ ಎಂದು ಮಾವೋರವರಿಗೆ ತಿಳಿಸಿ" ಎಂದು ಫು-ಚುವಾನ್ ಹೇಳಿದ. ಚುನ್-ಸಿಂಗ್‌ಳು

ಕಣ್ಣಲ್ಲಿ ನೀರು ತುಂಬಿಕೊಂಡು, “ ಕರುಣಾಮೂರ್ತಿ ಮಾವೋ ಇಲ್ಲದಿದ್ದರೆ ನಾನು ಇಷ್ಟುಹೊತ್ತಿಗೆ ಒಬ್ಬ ವಿಧವೆಯಾಗಿರುತ್ತಿದ್ದೆ” ಎಂದಳು. ಒಂದೆ ಅವಳನ್ನು ಬಲಾತ್ಕಾರವಾಗಿ ಬಾಲ್ಯವಿವಾಹದಲ್ಲಿ ಕೊಡಬೇಕೆಂದು ಗೊತ್ತಾಗಿದ್ದ ರೋಗಪೀಡಿತ ಮನುಷ್ಯ ಆದೇತಾನೆ ಸತ್ತಿದ್ದ.

ಫೆಬ್ರವರಿ ೪ನೇ ದಿನ ಗ್ರಾಮಾಧ್ಯಕ್ಷನೊಡನೆ, ಜಿಲ್ಲಾಕೇಂದ್ರಕ್ಕೆ ವಿವಾಹಸನ್ನದನ್ನು ಪಡೆಯಲು ಮದುವೆಯಾಗುವ ನಾಲ್ವರೂ ಹೊರಟರು. ಜಿಲ್ಲಾಧಿಕಾರಿಯ ಕೊಠಡಿಯಲ್ಲಿದ್ದ ರಾಷ್ಟ್ರೀಯ ನಾಯಕರುಗಳ ಚಿತ್ರಗಳನ್ನು ನೋಡಿ ಪರಿಚಯ ಮಾಡಿಕೊಂಡರು. ಅನಂತರ ಜಿಲ್ಲಾಧಿಕಾರಿ ಅವರಿಗೆ ಕೆಲವು ಪ್ರಶ್ನೆಗಳನ್ನು ಹಾಕಿ, ಹಿನ್ನೆಲೆಯನ್ನೆಲ್ಲಾ ತಿಳಿದುಕೊಂಡು, ಅವರು ತಮ್ಮ ಸ್ವಂತ ಇಚ್ಛೆಯಮೇಲೆಯೇ ವಿವಾಹವಾಗುತ್ತಿರುವರೆಂಬುದನ್ನು ಖಚಿತ ಮಾಡಿಕೊಂಡ. ನಾಲ್ವರೂ ಆವೇದನ ಪತ್ರಗಳಿಗೆ ಸಹಿ ಹಾಕಿಕೊಟ್ಟರು ಮತ್ತು ಕೂಡಲೇ ಸನ್ನದುಗಳು ಕೊಡಲ್ಪಟ್ಟವು. ಜಿಲ್ಲಾಧಿಕಾರಿ ಮೊದಲುಗೊಂಡು ಎಲ್ಲ ಅಧಿಕಾರಿವರ್ಗದವರೂ ಈ ನಾಲ್ವರನ್ನೂ ಅಭಿನಂದಿಸಿದರು. ಅವರ ಮುಂದಿನ ಕಾರ್ಯಕ್ರಮವೇನೆಂದು ಕೇಳಿದಾಗ, ಫು-ಚುವಾನ್ ಮತ್ತು ಟಾ-ಮಿಂಗ್ ಇಬ್ಬರೂ ಸರ್ಕಾರದ ಜನತಾ ಸೈನ್ಯಕ್ಕೆ ಸೇರುವೆವೆಂದು ಹೇಳಿದರು. “ ಜಮೀನ್ದಾರರ ತೊಂದರೆ ಈಗ ತಪ್ಪಿದೆ. ಆದರೆ ಅವರ ನಾಯಕ ಚಿಯಾಂಗ್-ಕೈ-ಷೇಕ್ ಮತ್ತು ಅವನ ಯಜಮಾನ ಅಮೆರಿಕನ್ ಸಾಮ್ರಾಜ್ಯಶಾಹಿಯಿಂದ ನಮಗೆ ತೊಂದರೆ ಇದ್ದೇ ಇದೆ. ಈ ಒಡೆಯರುಗಳ ಪ್ರಭಾವವನ್ನು ಬಡಿದುಹಾಕದಹೊರತು ಜಮೀನ್ದಾರರು ಸಂಪೂರ್ಣವಾಗಿ ಬಗ್ಗರು ” ಎಂದು ಹೇಳಿದರು. ಎಲ್ಲರೂ ಅವರ ರಾಷ್ಟ್ರಪ್ರೇಮವನ್ನು ಕೊಂಡಾಡಿದರು.

ನಾಲ್ವರೂ ಹಳ್ಳಿಗೆ ವಾಪಸು ಬಂದಾಗ ಹಳ್ಳಿಯ ರೈತಸಮೂಹವೇ ಅವರನ್ನು ಸ್ವಾಗತಿಸಲು ಊರಬಾಗಿಲಬಳಿ ನೆರೆದಿತ್ತು. ಎಲ್ಲರೂ ಸಂತೋಷದಿಂದ ಹಾಡುತ್ತಿದ್ದರು. ಎಂದಿನಂತೆ ಪುನಃ ದೇವಸ್ಥಾನದ ಮುಂದೆ ಒಂದು ವೇದಿಕೆ ಸಿದ್ಧವಾಯಿತು. ಪ್ರದೇಶವೆಲ್ಲ ಬಣ್ಣಬಣ್ಣದ ಹೂಗಳಿಂದ ಅಲಂಕೃತವಾಯಿತು. “ ವಿವಾಹ ಸ್ವಾತಂತ್ರ್ಯಸಾಧಕರು ” ಮತ್ತು “ ಕ್ರಾಂತಿ

ಯಲ್ಲಿ ಸಹವರ್ತಿಗಳು" ಎಂಬ ಬರಹಗಳು ಅಲ್ಲಲ್ಲಿ ಕಂಡುಬಂದವು. ದೇವ ಸ್ಥಾನದ ಮುಂಭಾಗದಲ್ಲಿದ್ದ ಹಳೆಯ ಮರಗಳೂ ಕೆಂಪು ರೇಷ್ಮೆಯ ಬಾವುಟ ಗಳಿಂದ ನಲಿದಾಡುತ್ತಿದ್ದವು. ಅಸ್ತಮಿಸುತ್ತಿದ್ದ ಸೂರ್ಯನ ಕಿರಣಗಳು ಓರೆಯಾಗಿ, ವೇದಿಕೆಯ ಮಧ್ಯದಲ್ಲಿದ್ದ ಮಾವೋರವರ ಪಟದಮೇಲೆ ಬೆಳಕು ಚೆಲ್ಲಿದ್ದವು, ವಧೂವರರು ಸಮಾರಂಭಕ್ಕಾಗಿ ಕೊಂಡ ನೂತನ ವಸ್ತ್ರಗಳನ್ನುಟ್ಟು ಚಿಟ್ಟೆಗಳಂತೆ ಅತ್ತಿಂದಿತ್ತ ಓಡಾಡುತ್ತಾ ಎಲ್ಲರೊಡನೆಯೂ ಮಂದಹಾಸದಿಂದ ಸಂಭಾಷಿಸುತ್ತಿದ್ದರು. ಕೊನೆಗೆ ಪುರಪ್ರಮುಖರ ಸಮ್ಮುಖ ದಲ್ಲಿ ವಿವಾಹಮುಚ್ಚಳಿಕೆಗೆ ನಾಲ್ವರೂ ಸಹಿ ಹಾಕಿ ದಾಂಪತ್ಯ ಜೀವನದ ಪ್ರಮಾಣವಚನ ಸ್ವೀಕರಿಸಿದರು. ಅನಂತರ ಫು-ಜುವಾನ್ ಮತ್ತು ಟಾ-ಮಿಂಗ್‌ರು ವೇದಿಕೆಯನ್ನೇರಿ ತಾವು ಮುಂದೆ ಜನತಾ ಸೈನ್ಯಕ್ಕೆ ಸೇರುವ ನಿರ್ಧಾರವನ್ನು ತಿಳಿಸಿದರು. ಒಡನೆಯೇ ಸಭೆಯಲ್ಲಿ ಸಹಸ್ರಾರು ಕೈಗಳು ಮೇಲೆದ್ದು "ನಾವೂ ಜನತಾಸೈನ್ಯಕ್ಕೆ ಸೇರುತ್ತೇವೆ" ಎಂಬ ಘೋಷಣೆ ಕೇಳಿಬಂತು. ಆಗ ಸಿಕ್-ವು ಮೇಲೆದ್ದು, "ಸಂಗಾತಿಗಳೇ! ನೀವೆಲ್ಲ ಜನತಾ ಸೈನ್ಯಕ್ಕೆ ಸೇರಲು ಉತ್ಸುಕರಾಗಿರುವುದು ನಿಮ್ಮ ದೇಶಪ್ರೇಮವನ್ನು ಹೊರಗೆಡಹುತ್ತದೆ. ಆದರೆ, ಈಗ ನಮ್ಮ ಮುಂದಿರುವ ತುರ್ತಾದ ಕರ್ತವ್ಯ, ಉತ್ಪಾದನೆ ಹೆಚ್ಚಿಸುವುದು. ಆದ್ದರಿಂದ ಸಧ್ಯದಲ್ಲಿ ಸೈನ್ಯ ಸೇರುವ ಯೋಜನೆ ಯನ್ನು ಬಿಟ್ಟರೆ ಒಳಿತು" ಎಂದನು. ಎಲ್ಲರೂ ಅವನ ಸಲಹೆಗೆ ಒಪ್ಪಿದರು.

ಆದಾದಮೇಲೆ ಕೋ-ಚಾಂಗ್ ವೇದಿಕೆಯನ್ನೇರಿ ರಾಷ್ಟ್ರಾಧ್ಯಕ್ಷ ಮಾವೋರವರಿಗೆ ಬರೆದ ಕಾಗದವನ್ನು ಓದಿದನು. ಆ ಕಾಗದದಲ್ಲಿ ರೈತರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೆಲ್ಲ ಸಂಗ್ರಹಿಸಿರುವುದಾಗಿಯೂ, ಏನಾದರೂ ತಿದ್ದುಪಾಟು ಆಗಬೇಕಾದಲ್ಲಿ ಮಾಡಬಹುದೆಂದೂ ತಿಳಿಸಿದನು. ಸರಿಯಾಗಿ ದ್ದರೆ, ಅಂದೇ ಆ ಕಾಗದ ಕಳುಹಿಸಬಹುದೆಂದೂ, ಇನ್ನೈದುದಿನಗಳೊಳಗೆ ಅದು ಮಾವೋರವರಿಗೆ ತಲಪುವುದೆಂದೂ ಹೇಳಿದನು. ಎಲ್ಲರೂ ನಿಶ್ಶಬ್ದ ರಾಗಿ ಒಮ್ಮನಸ್ಸಿನಿಂದ ಕಾಗದ ಓದುವುದನ್ನು ಕೇಳಿದರು. ಕಾಗದ ಈ ರೀತಿ ಇತ್ತು:



ಕರುಣಾಮೂರ್ತಿ ಮಾವೋರವರ ಪಟದ ಮುಂದೆ ಹಳ್ಳಿಯವರೆಲ್ಲಾ ಕುಣಿಯುತ್ತಾ ನಕ್ಕು ನಲಿದಾಡಿದರು.

“ ಚೀನೀ ಜನತೆಯ ಉದ್ಧಾರಕ, ನಮ್ಮ ಪ್ರೀತಿಯ ರಾಷ್ಟ್ರಾಧ್ಯಕ್ಷ ಮಾವೋರವರೇ !

“ ನಾವು ಸಿ೯-ಲು ಹಳ್ಳಿಯ ರೈತರು. ನಮ್ಮ ವಿಮೋಚನೆಗೆ ನೀವು ನೀಡಿದ ನೆರವಿಗಾಗಿ ವಂದನೆಯನ್ನರ್ಪಿಸಿ, ಮುಂದೆ ನಾವು ಏನೇನುಮಾಡ ಬೇಕೆಂದಿದ್ದೇವೆ ಎನ್ನುವ ಯೋಜನೆಯನ್ನು ವಿವರಿಸಲು ನಿಮಗೆ ಈ ಪತ್ರ ಬರೆಯುತ್ತಿದ್ದೇವೆ.

“ ೧೯೨೭ರಲ್ಲಿ ಪ್ರತಿಗಾಮೀ ಜಮೀನ್ದಾರರು ಮತ್ತು ಯುದ್ಧಖೋರರ ವಿರುದ್ಧ ನಾವು ನಡೆಸಿದ ಕಠಿಣ ಹೋರಾಟದಲ್ಲಿ ನೀವಿತ್ತ ನಾಯಕತ್ವದ ನೆನಪು ನಮ್ಮಲ್ಲನೇಕರಲ್ಲಿ ಅಚ್ಚಳಿಯದೆ ನಿಂತಿದೆ. ಅದಾದ ಸ್ವಲ್ಪ ದಿನ ಗಳಲ್ಲೇ ಮೂರ್ಖ ಚಿಯಾಂಗ್-ಕೈ-ಷೇಕ್ ದ್ರೋಹ ಬಗೆದದ್ದರಿಂದ ನೀವು ಕೆಲವು ಕಾಲ ಹಿಂಜರಿಯಬೇಕಾಯಿತು. ಆಗ ನಮ್ಮನ್ನೆಲ್ಲಾ ಕಾಳರಾತ್ರಿ ಮುಸುಕಿದಂತಿತ್ತು. ಒಂದುಕಡೆ ಜಮೀನ್ದಾರರು ಅಧಿಕ ಬಾಡಿಗೆ ವಸೂಲು ಮಾಡುತ್ತ ನಮ್ಮನ್ನು ಹಿಂಡಿ ಹಿಪ್ಪೆಕಾಯಿ ಮಾಡುತ್ತಿದ್ದರು. ಇನ್ನೊಂದು ಕಡೆ, ಅಂದಿನ ನೀಚಸರ್ಕಾರ ಕೇಳರಿಯದ ಸುಂಕಗಳನ್ನು ಹೊರಿಸಿದ್ದಷ್ಟೇ ಅಲ್ಲದೆ ಅವರ ಯುದ್ಧಕ್ಕಾಗಿ ಜನಬಲವನ್ನು ಒದಗಿಸುವಂತೆ ಪೀಡಿಸುತ್ತಿತ್ತು. ಸುಮಾರು ೨೦ ವರ್ಷಗಳವರೆಗೆ, ಅಕ್ಕಿ ಬೆಳೆಯುವ ನಾವು, ಒಂದು ಅಗಳು ಅನ್ನದ ರುಚಿ ಕಾಣಲಿಲ್ಲ. ಕೇವಲ ಒಣಗಿದ ಆಲೂಗೆಡ್ಡೆಯ ಸಿಪ್ಪೆಯನ್ನು ತಿಂದುಕೊಂಡೇ ಜೀವನ ಸಾಗಿಸಿದೆವು. ನಮ್ಮ ಬಟ್ಟೆಯೆಲ್ಲಾ ಹರಿದು ಚಿಂದಿಚಿಂದಿಯಾಗಿದ್ದಿತು. ಒಂದು ಜೊತೆ ಚಪ್ಪಲಿ ನಮ್ಮ ಪಾಲಿಗೆ ಒಂದು ದೊಡ್ಡ ವೈಭವದ ವಸ್ತುವಾಗಿತ್ತು. ರಾತ್ರಿಯ ಹೊತ್ತು ನಾವು ಹಂದಿ, ಕೋಳಿಗಳ ಜೊತೆಯಲ್ಲಿ ಕಸದ ಕೂಪದಲ್ಲಿ ಮಲಗುತ್ತಿದ್ದೆವು. ನಮ್ಮ ಜೀವನ ಆ ಪ್ರಾಣಿಗಳ ಜೀವನಕ್ಕಿಂತಲೂ ಕೀಳಾಗಿತ್ತು. ಇದರ ಜೊತೆಗೆ, ಚಿಯಾಂಗ್-ಕೈ-ಷೇಕನ ಹೆದರಿಕೆ ಬೇರೆ ನಮ್ಮನ್ನು ಸದಾ ಕಾಡಿಸುತ್ತಿತ್ತು.

“ ೧೯೪೯ನೇ ಆಗಸ್ಟ್ ತಿಂಗಳಲ್ಲಿ ನೀವು ಹಿಂದಿರುಗಿ ಬಂದಿರಿ. ಅಂದರೆ ನೀವು ಬೆಳೆಸಿದ ಮತ್ತು ತರಪೇತುಕೊಟ್ಟ ಜನತಾಸೈನ್ಯ ಮತ್ತು ದಳಗಳು ನಮ್ಮ ನೆರವಿಗೆ ಬಂದವು. ಆಗಿನ ನಮ್ಮ ಸಂತೋಷ ವರ್ಣಿಸ

ಲಸದಳವಾದುದಾಗಿತ್ತು. ಮರಳುಭೂಮಿಯಲ್ಲಿ ನೀರು ದೊರೆತಾಗ ಅಥವ ಒಣಗಿಹೋಗಿದ್ದ ಗಿಡವೊಂದು ಚಿಗುರಿ ಪೂರ್ಣವಾಗಿ ಅರಳಿದಾಗ ಆಗು ವಷ್ಟು ಆನಂದ ನಮಗಾಯಿತು.

"ಕಳೆದ ೩೦ ವರ್ಷಗಳಿಂದಲೂ ನೀವು ಮತ್ತು ನಿಮ್ಮ ಸಹೋದ್ಯೋಗಿ ಗಳು, ಚೀನಾದೇಶವನ್ನು ಪರದಾಸ್ಯದಿಂದ ಬಿಡುಗಡೆಮಾಡುವ ಜನತೆಯ ಪವಿತ್ರ ಹೋರಾಟವನ್ನು ನಡೆಸಿಕೊಂಡು ಬಂದಿದ್ದೀರಿ. ಈಗ ನಮಗೆ ಸುಖದ ಸವಿಯೂಟ ದೊರೆತಿದೆ. ಇದಕ್ಕೆ ನಾವು ನಿಮಗೆ ಚಿರಋಣಿಗ ಳಾಗಿದ್ದೇವೆ. ನಿಮ್ಮ ಪ್ರತ್ಯಕ್ಷ ನಿದರ್ಶನದಿಂದಲೂ ಮತ್ತು ಕಮ್ಯೂನಿಸ್ಟ್ ಪಕ್ಷದ ಸಾಧನೆಯಿಂದಲೂ 'ವಿಧಿ', ಜಾತಕ' ಮೊದಲಾದವುಗಳಲ್ಲಿ ಎಳ್ಳಷ್ಟು ಸತ್ಯವಿಲ್ಲವೆಂದು ಇಂದು ನಾವು ಅರಿತಿದ್ದೇವೆ.

" ನೀವು ಇತ್ತಿರುವ ತಿಳುವಳಿಕೆ ನಮ್ಮ ಅದೃಷ್ಟವನ್ನು ಬದಲಾಯಿ ಸಲು ಸಹಾಯಕವಾಗಿದೆ. ನಮ್ಮ ಹಳ್ಳಿಯಲ್ಲಿ ಇಂದು ಭೂಸುಧಾರಣೆ ಜಾರಿಗೆ ಬಂದಿದೆ ; ಪಾಳೆಯಗಾರ ಸುಲಿಗೆಯ ಪದ್ಧತಿ ಸಂಪೂರ್ಣವಾಗಿ ನಿರ್ನಾಮವಾಗಿದೆ ; ಗುಲಾಮಗಿರಿಯ ಸರಪಳಿ ತುಂಡರಿಸಲ್ಪಟ್ಟಿದೆ. ಈಗ ನಾವು ನೇರವಾಗಿ ತಲೆ ಎತ್ತಿ ನಿಂತು ನಮ್ಮ ಹಳ್ಳಿಯ ಒಡೆತನವನ್ನು ನಾವೇ ಪಡೆದಿದ್ದೇವೆ.

" ಇನ್ನೊಂದು ವಿಷಯ ನಿಮಗೆ ಅರಿಕೆಮಾಡಿಕೊಳ್ಳಬೇಕು. ಅದು ಫು-ಚುವಾನ್ ಚುನ್-ಸಿಂಗ್ ಮತ್ತು ಟಾ-ಮಿಂಗ್ ಯು-ಲಿಯನ್ ರವರ ಮದುವೆಗಳ ವಿಷಯ. ಈ ನಾಲ್ವರೂ ಜನಸೈನ್ಯದ ಸದಸ್ಯರು. ಹಿಂದೆ ಜಮೀನ್ದಾರರ ಕಪಿಮುಷ್ಟಿಯಲ್ಲಿ ಸಿಕ್ಕಿ ನುಚ್ಚು ನೂರಾಗಿದ್ದವರಲ್ಲಿ ಇವರೂ ಕೆಲವರು. ಈಗ ಇವರೆಲ್ಲರಿಗೂ ಜಮೀನು ದೊರೆತಿದೆ. ಮತ್ತು ತಮ್ಮ ಜೀವನ ಸಂಗಾತಿಗಳನ್ನು ತಮ್ಮ ಸ್ವಂತ ಇಚ್ಛೆಯಮೇಲೆ ಆರಿಸಿಕೊಂಡಿ ದ್ದಾರೆ.

" ನಮ್ಮ ಹಳ್ಳಿಯಲ್ಲಿ ಒಟ್ಟು ೧೯೨ ಸಂಸಾರಗಳಿವೆ. ಭೂಸುಧಾರಣೆಗೆ ಮುಂಚೆ ೧೧೫ಕ್ಕೂ ಮಿಕ್ಕು ಸಂಸಾರಗಳು ಜಮೀನಿಲ್ಲದೆ ದುಡಿಯುತ್ತಿದ್ದವು. ಭೂಸುಧಾರಣೆಯಾದಮೇಲೆ ನಮಗೆ ಜಮೀನ್ದಾರರಿಂದ ೮೨ ಟನ್ ೭ ಟಾ

ಖುಷ್ಕಿಜಮೀನೂ,೧೨ರ್ಟಾ ೫೭ಟೌ ತರೀಜಮೀನೂ, ೪೫ವ್ಯವಸಾಯಸಾಮ
ಗ್ರಿಗಳೂ ೬ಜೊತೆ ಎತ್ತುಗಳೂ,೫೨ಕೋಣಗಳೂ ಮತ್ತು ಸುಮಾರು ೪,೦೦೦
ಮೂಟೆ ಅಧಿಕ ಆಹಾರಪದಾರ್ಥಗಳೂ ದೊರೆತವು. ಹಿಂದೆ ನಾವು ತುಳಿ
ಯುತ್ತಿದ್ದ ಭೂಮಿಯೂ, ತಲೆಯಮೇಲಿದ್ದ ಮೇಲ್ಛಾವಣಿಯೂ ಬೇರೆಯವ
ರದಾಗಿತ್ತು. ನಾವು ದೂರು ಹೇಳುವುದಾಗಲೀ, ಕಣ್ಣೀರು ಸುರಿಸುವುದಾ
ಗಲೀ ದುಸ್ಸಾಧ್ಯವಾಗಿತ್ತು. ಈಗ ನಮಗೆ ನಮ್ಮದೇ ಆದ ಮನೆಗಳಿವೆ.
ನಮ್ಮದೇ ಜಮೀನಿದೆ ಮತ್ತು ಉಜ್ವಲ ಭವಿಷ್ಯ ನಮ್ಮ ಕಣ್ಣುಮುಂದೆ
ಕಟ್ಟಿದಂತಿದೆ.

"ಆದ್ದರಿಂದ ನಾವು ನಮ್ಮೆಲ್ಲ ಶಕ್ತಿಯನ್ನೂ ಒಂದುಗೂಡಿಸಿ, ಕೆರೆಏರಿ
ಗಳನ್ನು ದುರಸ್ತುಮಾಡುವುದು, ಹೆಚ್ಚು ಭೂಭಾಗವನ್ನು ಉತ್ತು ಫಲವ
ತ್ತಾಗಿ ಮಾಡುವುದು—ಇವುಗಳಲ್ಲಿ ತೊಡಗಬೇಕೆಂದು ನಿರ್ಧರಿಸಿದ್ದೇವೆ.
ಬರುವ ಸುಗ್ಗಿಯಲ್ಲಿ ಅತ್ಯಧಿಕ ಬೆಳೆಯನ್ನು ಬೆಳೆಯುವುದರ ಮೂಲಕ ನೀ-
ವಿತ್ತ ನೆರವಿಗೆ ಪ್ರತಿಫಲ ಕೊಡಬೇಕೆಂದೂ ಹಾಗೇ ರಾಷ್ಟ್ರದ ಆರ್ಥಿಕ ಪರಿ
ಸ್ಥಿತಿಯನ್ನು ಮತ್ತಷ್ಟು ಬಲಗೊಳಿಸಬೇಕೆಂದೂ ನಮ್ಮೆಲ್ಲರ ಅಭಿಲಾಷೆ.

"ನಿಮಗೆ ತಿಳಿಸಬೇಕೆಂಬ ವಿಷಯಗಳು ಇನ್ನೂ ಎಷ್ಟೋ ಇವೆ.
ನಾವೆಲ್ಲ ಸೇರಿ ಒಂದು ಶಾಲೆ ನಿರ್ಮಿಸಲು ಯೋಚಿಸಿದ್ದೇವೆ. ಸದ್ಯದಲ್ಲೇ
ಒಂದು ಸಹಕಾರ ಸಂಘವನ್ನು ಸ್ಥಾಪಿಸುವವರಿದ್ದೇವೆ. ಒಂದು ಔಷಧ
ಶಾಲೆಯೂ ಬರಲಿದೆ.

"ಮುಂದಿನ ಸುಗ್ಗಿಕಾಲ ಮುಗಿದೊಡನೇ ನಮ್ಮ ಹಳ್ಳಿಯ ಹೆಂಗ
ಸರು ಒಂದು ನೇಯ್ಗೆಯ ಕಾರ್ಖಾನೆಯನ್ನು ಸಹಕಾರಸಂಘದ ನೆರವು
ಪಡೆದು ಪ್ರಾರಂಭಿಸಲು ಸಿದ್ಧತೆ ನಡೆಸುತ್ತಿದ್ದಾರೆ. ನಮ್ಮ ಮುಂದಿನ ದಿನ
ಗಳು ಹೆಚ್ಚುಹೆಚ್ಚು ಅಭಿವೃದ್ಧಿಗೊಳ್ಳುತ್ತವೆ ಎಂಬುದರಲ್ಲಿ ನಮಗೆ ದೃಢ
ವಿಶ್ವಾಸವಿದೆ. ಇಂದು ಮುಂಬರಲಿರುವ ಇನ್ನೂ ಉಜ್ವಲವಾದ ನಾಳೆಯು
ಪ್ರಾರಂಭವಷ್ಟೆ!

"ನಮ್ಮ ಸುಖ-ಸಂತೋಷ ಇದೇ ರೀತಿ ಮುಂದುವರೆಯಬೇಕಾದರೆ
ಅಮೆರಿಕವನ್ನು ಎದುರಿಸುವ ಮತ್ತು ಕೊರಿಯಾಕ್ಕೆ ಸಹಾಯ ನೀಡುವ




ಕ್ರಾಂತಿಗೆ ಮುಂಚೆ ಮತ್ತು ಕ್ರಾಂತಿಯ ನಂತರ ಚೀನಾದ ವ್ಯವಸಾಯೋತ್ಪತ್ತಿಯನ್ನು ಈ ಚಿತ್ರದಲ್ಲಿ ಕಾಣಬಹುದು. ಕಪ್ಪು ಛಾಯೆಯ ಭಾಗ ಕ್ರಾಂತಿಯ ಮುಂಚಿನ ಅತ್ಯಧಿಕ ವಾರ್ಷಿಕ ಉತ್ಪತ್ತಿ. ಬಿಳಿಛಾಯೆಯ ಭಾಗ ಭೂಸುಧಾರಣೆಯಾದಮೇಲೆ ೧೯೫೨ರ ಉತ್ಪತ್ತಿ

ಚಳವಳಿಗೆ ನಾವು ಬೆಂಬಲವೀಯಬೇಕೆಂದು ನಮಗೆ ಚೆನ್ನಾಗಿ ಮನದಟ್ಟಾಗಿದೆ. ನಮ್ಮ ಶತ್ರುಗಳಾದ ಅಮೆರಿಕನ್ ಆಕ್ರಮಣಕಾರರು ಮತ್ತು ಅವರ ಗುಲಾಮ ಚಿಯಾಂಗ್-ಕೈ-ಷೇಕ್‌ನನ್ನು ಸಂಪೂರ್ಣವಾಗಿ ಹೊಡೆದಟ್ಟಿದ ಹೊರತು ನಮಗೆ ಗಂಡಾಂತರ ತಪ್ಪಿದ್ದಲ್ಲ.

" ಆದ್ದರಿಂದ ಸಿ-ಲು ಹಳ್ಳಿಯ ರೈತರಾದ ನಾವುಗಳು ಕೆಳಗೆ ಕಂಡ ಕಾರ್ಯಕ್ರಮವನ್ನು ತಪ್ಪದೆ ನಡೆಸುತ್ತೇವೆಂದು ಪಣತೊಟ್ಟದ್ದೇವೆ :

" (೧) ಎಲ್ಲ ಜಲಾಶಯಗಳನ್ನೂ ಕೆರೆಏರಿಗಳನ್ನು ಕೂಡಲೇ ಸರಿಪಡಿಸಿ ವಸಂತಕಾಲದ ಸುಗ್ಗಿಯಹೊತ್ತಿಗೆ ಹೆಚ್ಚು ಭೂಮಿಯನ್ನು ಉತ್ತು ಆಹಾರಪದಾರ್ಥಗಳ ಉತ್ಪನ್ನವನ್ನು ಹೆಚ್ಚಿಸುತ್ತೇವೆ.

" (೨) ರೈತಸಂಘವನ್ನು ದೊಡ್ಡದಾಗಿ ಬೆಳೆಸಿ ಬಲಿಷ್ಠ ಸಂಘಟನೆಯನ್ನಾಗಿ ಮಾಡುತ್ತೇವೆ. ಪ್ರತಿಗಾಮಿ ಮತ್ತು ಕ್ರಾಂತಿ-ವಿರೋಧಿಶಕ್ತಿಗಳ ಬಗ್ಗೆ ಹೆಚ್ಚು ಜಾಗರೂಕರಾಗಿರುತ್ತೇವೆ. ಮತ್ತು ಸಾರ್ವಜನಿಕ ನೆಮ್ಮದಿಯನ್ನು ಕಾಪಾಡುತ್ತೇವೆ.

" (೩) ಅಮೆರಿಕದ ಆಕ್ರಮಣವನ್ನು ವಿರೋಧಿಸಲು ಮತ್ತು ಕೊರಿಯಾಕ್ಕೆ ಸಹಾಯವೆಸಗಲು ನಾವು ಜನ-ಧನ ಬಲದೊರಕಿಸಿ ಕೊಡುತ್ತೇವೆ. ಕ್ರಾಂತಿಯು ಜಯಪ್ರದವಾಗುವುದಕ್ಕೆ ನಾವೆಲ್ಲ ಹೃತ್ಪೂರ್ವಕ ಬೆಂಬಲ ನೀಡುತ್ತೇವೆ.

" ನಿಮಗೆ ಬಂಡೆಯಂತೆ ಲಚ್ಚಳಿಯದ, ದೃಢವಾದ ಆರೋಗ್ಯ ಲಭಿಸಲಿ, "

" ಸೂರ್ಯನಂತೆ ನಿಮ್ಮ ತೇಜಸ್ಸು ಎಂದೆಂದಿಗೂ ಬೆಳಗುತ್ತಿರಲಿ"

ಎಂದು ಆಶಿಸುವ

(ಸಹಿ)

4-2-1951 ಸಿ-ಲು ಹಳ್ಳಿಯ ರೈತಬಾಂಧವರು



**ತಿದ್ದುಪಡಿ :**—ಮೊದಲನೆಯ ಪುಟದ ೧೫ನೇ ಸಾಲಿನಲ್ಲಿ ೧೯೨೦ಕ್ಕೆ ಬದಲಾಗಿ ೧೯೩೭ ಎಂದು ತಿದ್ದಿಕೊಳ್ಳಬೇಕು.